# ಕಿನ್ನರ ಗೀತ

( ನಾಲ್ಕು ಕಥಾಕವನಗಳ ಸಂಗ್ರಹ )

ಕೃತಿಕಾರರು :

ಬಿ. ಹೆಚ್. ಶ್ರೀಧರ, ಎಂ. ಎ.,

«»

ಮುನ್ನುಡಿಕಾರರು :

ಜಿ. ಎ. ನರಸಿಂಹಮೂರ್ತಿ, ಬಿ. ಎಸ್‌ಸಿ.,

ಸಂಪಾದಕರು : ಕತೆಗಾರ.

«»

ಪ್ರಕಾಶಕರು :

ಆರ್. ಎಸ್. ನ್ಯೂಸ್ ಏಜೆನ್ಸಿ,

೬೫, ಚಿಕ್ಕಪೇಟೆ, ಬೆಂಗಳೂರು ಸಿಟಿ.

೧೯೪೭] [ಬೆಲೆ ಎಂಟಾಣೆ.

# ಮುನ್ನುಡಿ

"ಮುನ್ನುಡಿ" ಗ್ರಂಥಕ್ಕೆ ಒಂದು ಅಲಂಕಾರ. ನಮ್ಮ ನಮ್ಮ ಪರಿಚಯದ 'ನುಡಿ' ಇದು. ಶ್ರೀವರ್ಮಾ ಬಿ. ಹೆಚ್. ಶ್ರೀಧರ ಅವರ ಪ್ರೀತಿಯ ಒತ್ತಾಯದಿಂದ ಈ ಎರಡು ಮಾತನ್ನಿಲ್ಲಿ ಬರೆದಿದ್ದೇನೆ.

ಈ ಸಂಕಲನದಲ್ಲಿ ನಾಲ್ಕು 'ಕಥಾಕವನ' ಗಳಿವೆ. ಮೊದಲನೆಯದು ಶಾಲೆಯ ವಿದ್ಯಾರ್ಥಿ (ಕಿನ್ನರ) ಯೊಬ್ಬನ ಪ್ರೇಮಕತೆ; 'ಖಗ್ರಾಸಖಂಡ' ದಲ್ಲಿ ನೇತಾಜಿ ಸಾಮ್ರಾಜ್ಯ ಶಾಹಿಯಮೇಲೆ ನಡೆಸಿದ ಯುದ್ಧದ ಹೃದಯಂಗಮ ಕತೆ; 'ಹೂಬಾಳಿ'ನಲ್ಲಿ ಎಳೆಯ ಪ್ರೇಮಿಗಳಿಬ್ಬರ ಹೃದಯವು "ಜಡಧರ್ಮದಂಕುಶದ ತಿವಿತದಿಂದ" ಭಗ್ನವಾದ ದಾರುಣಕತೆ; ಕೊನೆಯದಾದ 'ಮಲ್ಲಿಕಾಮಾಧವೀಯ' ದಲ್ಲಿ ವಿಷಾದಾಂತವಾಗುತ್ತಿದ್ದ ಯುವಕ ಯುವತಿಯರ ಪ್ರಣಯವೊಂದು ಕೂಡಿಬಂದ ಕಥಾನಕ. ಹೀಗೆ ಜೀವನದಲ್ಲಿ ಕಂಡುಬರುವ ನಾನಾ ಸನ್ನಿವೇಶಗಳನ್ನು ಭಾವಪೂರ್ಣತೆಯಿಂದ ಸೊಗಸಾಗಿ, ಮನೋಜ್ಞವಾಗಿ ಚಿತ್ರಿಸಿದ್ದಾರೆ.

ಶ್ರೀವರ್ಮಾ ಶ್ರೀಧರರ ಕವಿತೆಗಳಲ್ಲಿ ಭಾವಪ್ರಧಾನವೇ ಹೊರತು ಕತೆಯ ಓಟವಲ್ಲ. ವರ್ಣನೆಯ ಸರಸ್ಸಿನಲ್ಲಿ ವಿಹರಿಸುತ್ತ ಕತೆ ಮಂದಗಾಮಿನಿಯಾಗಬಹುದು. ಈ ಒಂದು ದೋಷವನ್ನು ಸಾಮಾನ್ಯವಾಗಿ ಎಲ್ಲ 'ಕಥಾಕವನ'ಗಳಲ್ಲೂ ಕಾಣುತ್ತೇವೆ. 'ಕಥಾಕವನ'ದ

ಬೆಳೆ ಕನ್ನಡದಲ್ಲಿ ತೀರಾ ವಿರಳವಾಗಿರುವಾಗ ಈ ದೋಷ ಪ್ರಮಾದವಲ್ಲ.

ಶ್ರೀಧರರು ತರುಣ ಕವಿಗಳಲ್ಲಿ ಈಗಾಗಲೇ ಅಗ್ರಸ್ಥಾನ ಪಡೆದಿದ್ದಾರೆ. ಅವರ ಭಾವಗೀತೆಗಳು ಸಾಹಿತಿಗಳ ತಲೆದೂಗಿಸಿವೆ. ಸಂತತವಾದ ಅವರ ಕಾವ್ಯಾಭ್ಯಾಸ, ಆಳವಾದ ವಿದ್ಯಾಸಂಪನ್ನತೆ ಇವು ಕನ್ನಡ ಕವಿತಾ ಪ್ರಪಂಚದಲ್ಲಿ ಅವರಿಗೊಂದು ನಿರ್ದಿಷ್ಟ ಸ್ಥಾನವನ್ನು ದೊರಕಿಸಿಕೊಡುವುದರಲ್ಲಿ ಸಂದೇಹವಿಲ್ಲ.

ಇಲ್ಲಿ ಅರಳಿರುವ ಕೇವಲ ನಾಲ್ಕು ಹೂಗಳನ್ನು ನಿಮ್ಮೆದುರಿಗಿರಿಸಿದ್ದಾರೆ. ಇದಕ್ಕೆ ನೀವು ಕೊಡುವ ಸ್ವಾಗತವೇ ಇಂಥಾ ಹೂಗಳ ಹಿರಿಗೊಂಚಲಿಗೆ ದ್ಯೋತಕವಾಗಲೆಂದು ಹಾರೈಸುತ್ತೇನೆ.

೧೦—೩—೧೯೪೭
ಬೆಂಗಳೂರು

ಜಿ. ಎ. ನರಸಿಂಹಮೂರ್ತಿ.
ಸಂಪಾದಕ: ಕತೆಗಾರ

# ಕಿನ್ನರ ಗೀತ

‘‘ಉದಿತ ದಿನ ಮುದಿತ ವನ
ವಿಧ ವಿಧ ವಿಹಗಸ್ವನ
ಇದುವೆ ಜೀವ ಇದು ಜೀವನ
ಪವನದಂತೆ ಪಾವನ’’

ಎಂಬ ಕವಿಯ ನುಡಿಯ ಸವಿಯ
ಸವಿದೆನಿಂದು ಸಖಿಯರೇ
ತುಂಬಿದೊಲುಮೆ ಬಿಂಬಿಸಿರಲು
ಮುಖದಿ ಚಂದ್ರಮುಖಿಯರೇ!

[೧]ರವಿಯ ಸಂಜೆ ಹೆಜ್ಜೆಯಿಡಲು
ಕವಿಯ ‘ಬೆಳಗು’ ಕಾಣಿರೇ!
ರವಿಯ ಮಾಯೆ ಕವಿಯ ಛಾಯೆ,
ಇದರ ಮರ್ಮ ಬಲ್ಲಿರೆ?

ಇರುಳ ಹಗಲು ಮಾಡುವಂತೆ
ಮಿರುಗಿ ಮನವ [೨]ಬಳಸುವ

---

೧. (ಕತೆಗಾರನಾದ) ಕಿನ್ನರನು ಇತರ ವ್ಯಕ್ತಿಗಳನ್ನು ಸಂಧಿಸುವುದು ನಿತ್ಯವೂ ಮಧ್ಯಾಹ್ನ ಮೂರು ಗಂಟೆಗೆಂಬುದು ಇಲ್ಲಿ ಸೂಚಿತವಾಗಿದೆ.

೨. ಬಳಸುವ, ಎಳಸುವ ಎಂಬ ಮಾತುಗಳು ಇಲ್ಲಿ ಬಳಸುವಂಥ ಎಳಸುವಂಥ ಎಂಬ ಅರ್ಥದಲ್ಲಿ ಪ್ರಯೋಗಿಸಲಾಗಿದೆ ; ಮುಂದೆ ಸಂದರ್ಭಾನುಸಾರ ಇಂತಹ ಶಬ್ದಗಳಿಗೆ ಬಳಸೋಣ, ಎಳಸೋಣ ಎಂಬ ಅರ್ಥವನ್ನು ಕೊಡಲಾಗಿದೆ.

ತರಳದೃಷ್ಟಿ ನನಗೆ ಸಾಕು
 ಅಮರನಾಗಲೆಳಸುವ!

ಎಳೆಯ ಕೆಳೆಯ ಹುರುಪು ಗುಳ್ಳೆ-
 ಗುಳ್ಳೆಯಾಗಿ ಕಣ್ಣಿನ
ಕೊಳದಿ ತೇಲಿಬರಲು ಕಂಡೆ
 ಮೆಲುಪನಿಂದು ಹೆಣ್ಣಿನ!

ಇಂದು ವಯವು ಮೀರಲೆನ್ನ
 ಬಾಲ್ಯ ತನ್ನ ತೋರದು;
ಬಂಧವಿರದ ಬಂಧುರತೆಯ
 ಬಿಡಲು ಮನವು ಬಾರದು!

ಓದುವವರು ನೀವು ನಿಮ್ಮ-
 ನೋದಿಸುವುದು ನನ್ನದು;
ಓದುಬರಹದೊಡನೆ ಸೊಗವ-
 ನೂಡಿಸುವುದು ನಿಮ್ಮದು!

ಒಂದು ಹಕ್ಕಿ, ಒಂದು ಹಾಡು
 ಒಂದು ಮಿಂಚು-ಗೊಂಚಲು-
ಎಂದು ಬಯಸಿದವನಿಗಿಹುದು
 ಇಂದು ಸೊಬಗು ಹಂಚಲು!

ಮಳೆಯ ಬಿಲ್ಲ ಬಣ್ಣಸುತ್ತ
 ಕಳೆದ ಕಾಲ ವ್ಯರ್ಥವು;
ನಲುಮೆ ಬೆರೆದ ನಿಮ್ಮ ಕದಪ
 ಕಾಂಬುದೊಂದೆ ಅರ್ಥವು!

೩

ಏನು ಸಹಜ, ಏನು ಸರಳ
ಎನಿಪ ಬಣ್ಣದೋಕುಳಿ
ನಾಣು ಮೊಗವನೇರಿದಾಗ
ನನ್ನ ನಗೆಯ ಹಾವಳಿ !

ಎತ್ತ ಬಾನು ಎಲ್ಲಿ ನಾನು,
ಯಾವ ಲೋಕದೀಕ್ಷಣ ?
ಮತ್ತರಿಂಗೆ ಎತ್ತಲೇನು,
ಎಲ್ಲ ಮತ್ತವಾಕ್ಷಣ!

ಬೆನ್ನಿಗಿದ್ದ ತಮ್ಮನೊಲವು
ನಿಮ್ಮ ಕಣ್ಣು ಹೊಕ್ಕಿತೋ,
ಅಮ್ಮನೀವ ಮುದ್ದುನಗೆಯು
ನಿಮ್ಮ ಮುಖದಿ ಸಿಕ್ಕಿತೋ !

ನುಣುಪು-ಹೊಳಪು [೧]ಜೊನ್ನದೊಡಲ
ನಿಮ್ಮ ಬಿಡದೆ ಅಪ್ಪಿದೆ;
ತೆಳಪು ತಾನೆ ಮೆಚ್ಚಿ ಬಂದು
ನಡುವಿನಲ್ಲಿ ಒಪ್ಪಿದೆ !

ತರಗತಿಯಲಿ 'ತರಗತಿ'ಯನು
ಕಾಣಲಾರೆನೊಲುಮೆಯು
ಕುರುಡು ಬಾಹ್ಯಭೇದಗಳಿಗೆ ;
ಬಾರದಿಲ್ಲಿ ಜುಲುಮೆಯು!

---

೧. ನುಣುಪಾದ ಹೊಳಪು ಜೊನ್ನದೊಡಲುಳ್ಳ ನಿಮ್ಮನ್ನು ಬಿಡದೆ ಅಪ್ಪಿದೆ.

ಸೈತೆವೆತ್ತ ಸೀತೆ ಬಾರ,
  ಸಣ್ಣ ದ್ರುಪದನಂದನೇ,
ಓತು ಕರೆವೆ ಓಡಿ ಬಾರ
  ಕಮಲನಾಭನಂಗನೇ !

ಚೆಲ್ವಗಾತ್ರಿ ಚಾರುಮೂರ್ತಿ
  ಬಲ್ಲೆ ನಿನ್ನ ಬಗೆಯನು;
ನಲ್ಲನಿರುಪ, ನಲ್ಲ ಬರದ
  ಎಲ್ಲರನ್ನು ಬಲ್ಲೆನು !

ಬಣ್ಣವಿಟ್ಟ ೪ಸಾಳಿಗೆಯಲಿ
  ಬರುವ ನಿಮ್ಮ ಚಿತ್ರದ
ಬಣ್ಣ ಬೆಳಸುತಿಹುದು ಬಿನದ೫
  ನನ್ನ ಗುರುವು ಬಿತ್ತಿದ !

ಮುಗದ-ಮೋಡಿ, ನಗೆಯ ಕೋಡಿ,
  ನೇಹ ಬೆರೆದ ಸವಿ-ನುಡಿ—
ಜಗದ ತೊಡರೊಳಿಳಿದ ಮನವ
  ಹಿಡಿಯಲಿರುವ ಗಾರುಡಿ!

ಗಳಿಗೆಗೊಮ್ಮೆ ಕರುಳನಿರಿವ
  ಬಾಳಿನುಗ್ರ ಶಾಸನ
ಸುಳಿದರಿಲ್ಲಿ ಮಾಣದಿಹುದು
  ಅದಕೆ ಕಂಟಕಾಸನ !

---

೪. ಉಡುಗೆ. ೫. ವಿನೋದವನ್ನು.

೧ಸರಳಿನಂಥ ಮಾತುಕಥೆಗೆ
ನೆರಳಿನಂಥ ರೂಪಿದೆ;
ಅರಳಿನಂಥ ನಿಮ್ಮ ಮನದಿ
ತೆರೆದ ಹಾಗು ತೆರಪಿದೆ!

ದುಂಡುಮಲ್ಲಿಗೆಯಲಿ ತೋರ್ಪ
ಮುಗ್ಧಭಾವವಿಲ್ಲಿದೆ;
ಕೆಂಡ ಸಂಪಿಗೆಯಲಿ ಕಾಂಬ
ಮುನಿಸು-ವಣ್ಣ ಚೆಲ್ಲಿದೆ!

ಪಾರಿಜಾತ ಕೋಮಲತೆಯ
ಕಳಚಿ ಕೊಟ್ಟ ಹಾಗಿದೆ;
ಏರು-ನಗೆಯ ಕಮಲವಿಲ್ಲಿ
ನೂರುಮುಡಿಯೊಳರಳಿದೆ!

ಸೂರ್ಯಕಾಂತಿ ಕಾಯಕಾಂತಿ-
ಯನ್ನು ಕಳುಹಿಕೊಟ್ಟಿದೆ;
ಧೈರ್ಯವಾಗಿ ಎದೆಯ ತೆರೆದು
ಅಸುಗೆ ನಿಂತುಬಿಟ್ಟಿದೆ!

ಕವನದೊಡವ ಮೆಚ್ಚನೀವೆ
ಬನ್ನಿ ಒಲಿದ ಗಿಣಿಗಳೇ

---

೧. ಬಿಚ್ಚು ಮಾತುಗಳಾದರೂ ಚುಚ್ಚು ಮಾತುಗಳಲ್ಲ; ಕಿವಿಗಿಂಪೂ ಬಗೆಗೆ ತಂಪೂ ಆಗಿವೆ ಎಂದರ್ಥ. ಪದ್ಯದ ಉದ್ದಕ್ಕೂ ಅಡಗಿರುವ ಇಂತಹ ಸೂಕ್ಷ್ಮಾರ್ಥಗಳ ವಿವರಣೆಗೆ ಸಹೃದಯರೆ ಮಲ್ಲಿನಾಥತನವನ್ನು ವಹಿಸಬೇಕು.

ಅವನಿಗಿಳಿದ ಅಪ್ಸರೆಯರೆ
ಮಧುರ ವಾಕ್ಯ ಖಣಿಗಳೇ!

ಅಳುಕು, ಥಳುಕು, ಅನ್ಯಭಾವ
ಹತ್ತಿರಕ್ಕೆ ಸೇರದು;
ಬೆಳಕೆ ಬೆಳುಕು; ಭಾವ ಭಂಗಿ
ಒಂದನೊಂದು ಮೀರದು!

ನಿಮಿಷಮಾತ್ರದಲ್ಲಿ ಜೀವ
ಸ್ವಪ್ನಲೋಕಕೇರಿತು;
ಭ್ರಮರಲೋಚನೆಯರೆ ನಿಮ್ಮ
ಅಕ್ಕಿಯೆದೆಯು ಹೀರಿತು!

ಸ್ಥಾನಮಾನ ಬರುವ ಹೋಹ
ಪ್ರಶ್ನೆಯಿತರ ಜನರಿಗೆ;
ಜ್ಞಾನದಾನವೆತ್ತ ನಿಮ್ಮ
ಪ್ರೇಮದಾನದೆದುರಿಗೆ?

ಜೀವಿಕೆಯನು ಪಡೆವ ಚಿಂತೆ
ಜೀವಕೀಗ ತಂಗಳು;
ತೀವಿದಳಲ ತಣಿಸಲಿಹುದು
ನೀವು ನಕ್ಕ ತಿಂಗಳು!

ಬಾಗಿ ನಡೆದು ಬೀಗಿದೆಲುಬು
ನೆಟ್ಟಗಾಯ್ತು ಪೆಣ್ಗಳೇ;
ಸೋಗು-ಬಾಳನುಳಿದೆನಿಲ್ಲಿ
ದಿಟ್ಟಬಗೆಯ ಪೊನ್ಗಳೇ!

೭

ಕಡಲ ತೆರೆಯ ಮೀರ್ವುದೊಮ್ಮೆ
  ನನ್ನ ನಿಮ್ಮ ಭಾವದ
ಮಿಡಿತದೇರು ಮೂಡಿಬರುವ
  ಗುರಿಯ ಕಂಡು ಜೀವದ!

"ಮಿಗದ ಹಾಗೆ ಸ್ವೈರವಾಗಿ
  ನೆಗೆದು ಚಿಮ್ಮಿ ಬಾಳುವ;
ಹಗಲ ಹಾಗೆ ಮುಗಿಲನೇರಿ
  ಬೆಳಕ ಹಾಡಿ ಕೇಳುವ!

ಸೋಗೆಯಂತೆ ಲಲಿತಲಾಸ್ಯ
  ನಮ್ಮ ಗೆಜ್ಜೆ ಹೂಡಲಿ;
ಯೋಗಿಯಂತೆ ಹರಿಸವಡೆದು
  ದಿವ್ಯಗಾನ ಮಾಡಲಿ!"

ಎಂದು ಬಗೆಯೆ ನಿಯಮ-ಬಂಧ
  ಒಂದು ಗಳಿಗೆ ಮರೆವುದು;
ನೊಂದ ಜೀವ ನಿಮಿರಿ ನಿಂದು
  ಧನ್ಯವೆಂದು ಮೆರೆವುದು!

೭೨

ಸಾಲೆಯೆದುರು ಹಸುರಿನಲ್ಲಿ
  ಉಲಿವ ನಿಮ್ಮ ತುಟಿಗಳ

---

೭. ಈ ಎರಡನೇ ಭಾಗವು ಕಥಾನಾಯಕನೂ ಇತರ ಪಾತ್ರಗಳೂ ಶಾಲೆಯ ತರಗತಿ ಕೋಣೆಯಲ್ಲಿ ಸೇರಿದಾಗ ನಡೆವ ವಿದ್ಯಮಾನಗಳನ್ನು ವಿವರಿಸ ಹೊರಟವೆ.

೮

ಲೀಲೆಯಿಂದ ಮುಗುದವಾಯ್ತು
ನೆರಳು ವೃಕ್ಷ ಕಟಗಳ!

ಕಣ್ಣು ನನ್ನ ಪ್ರಾಸ ಪಂಕ್ತಿ
ಚೆಲ್ಲಿ ಬಲೆಯ ಬೀಸಲು—
ಹೆಣ್ಣುತನದ ಲಮಧುರ ಭಾವ
ಅಹುದು ನನಗೆ ಮೀಸಲು!

ಚಂಪೆ ನಿನ್ನ ಮುಗುಳು-ನಗೆಯು
ಬಿರಿಯೆ, ದಂತವಿಭ್ರಮ
ಕೆಂಪು-ಬಿಗಿದ ವಜ್ರದೋಜೆ-
ಯಿಂದ ಹೊಳೆವ ಸಂಭ್ರಮ!

ಭ್ರೂವಿಳಾಸ-ತಜ್ಞೆಯಾದ
ಸೀತೆ ನಿನ್ನ ನೋಟವು
ಭಾವಚುಂಬಿ; ಇಹುದು ನಿನಗೆ
ಪುಟ್ಟ ರತಿಯ ಮಾಟವು!

ಎಲ್ಲಿ ಮೊಗವನೆತ್ತು ಎಲೆಲೆ
ಚಿನ್ನದಂಥ ಮಾಲತಿ,
ಎಲ್ಲ ನಾಣು ನೀನೆ ಆದೆ;
ಇದಕೆ ಏನು ಹೇಳುತಿ?

ಅರಳಿನಂತೆ ಕಂಗಳೆರಡು
ಸ್ನಿಗ್ಧ ಮಧುರವಾಗಿವೆ;

---

೮. ಮಾಧುರ್ಯ.

ತರಳೆ ಇತ್ತ ತಿರುಗು ಮುನಿಸು
ಹೋಯ್ತೊ ಇಹುದೊ ನೋಡುವೆ!

೯ಗೆಳೆಯನಂತೆ ನಾನು ನಿನಗೆ;
ನೀನು ಚಿಕ್ಕ ಹುಡುಗಿಯೇ ?
ತಿಳಿಯದೊಂದು ನುಡಿಯಬೇಡ ;
೧೦ಇಲ್ಲ ಪ್ರೀತಿಯಣುಗಿಯೇ !

ಆಳದಿರೆಲ್ಲ ಹುಸಿಯ ಮಾತು
ಎಂದು ತಿಳಿಯಬಾರದೆ ?
ತಳಿಕೆಯಿಲ್ಲ ಮನಕು ವಯಕು
ನಿನ್ನೊಳಿಲ್ಲಿ ಶಾರದೇ !

೧೧ನನ್ನ ಹಣೆಯ ಮೇಲೆ ಬರೆಯ-
ಲಿಲ್ಲ ಲಲಿತೆ ತಿಳಿಯಿತೆ ?
ಇನ್ನು ಕೋಪ ಬರುವುದೆನಗೆ;
ಪುಟದೊಳಿಹುದು ಹೊಳೆಯಿತೆ ?

೧೨ನಿನ್ನ ಮೇಲೆ ಮುಳಿವೆನೇಕೆ,
ಇಲ್ಲ; ಮಾನ ಹೋಯಿತೇ ?

---

೯. ಪುಟ ಏಳು ಮತ್ತು ಎಂಟರಲ್ಲಿ ಕಾಕು ಭೇದಗಳು ಹೇರಳವಾಗಿವೆ. ಅವುಗಳಲ್ಲಿ ಥಟ್ಟನೆ ಬದಲಾಗುವುದನ್ನು ಮಾತ್ರ ಇಲ್ಲಿ ಸೂಚಿಸಿದೆ. ಮೊದಲನೆಯದು ಗದ್ದರಿಕೆ.

೧೦. ಸಾಂತ್ವನ ಪ್ರಾರಂಭ.

೧೧. ಪುನಃ ಗದ್ದರಿಕೆ; (ಪುಸ್ತಕವನ್ನು ನೋಡುವುದನ್ನು ಬಿಟ್ಟು ನಾಯಕನ ಮುಖವನ್ನೇ ನೋಡುತ್ತಿರುವಾಗ).

೧೨. ಸಾಂತ್ವನ.

ರನ್ನದಂಥ ಕುವರಿ ನೀನು
  ಬನ್ನ ಬಡದಿರಾಯಿತೇ?

'ಒಂದು ಊರಿನಲ್ಲಿ ಒಬ್ಬ
  ಮುದುಕನಿದ್ದನಾತಗೆ
ಬಂಧು ಬಳಗವಿಲ್ಲ; ಹೋಗ
  ಲಾರನವನು ಭಿಕ್ಷೆಗೆ'

೧೩ಏನಿ'ದಯ್ಯೊ ಪಾಪ'! ಬಾಯಿ
  ಮುಚ್ಚಿ ಬರೆಯಲಾರಿರೇ?
ನಾನು ಬಲ್ಲೆ ನಿಮ್ಮ ಪರಿಯ
  ಸಲಿಗೆ ನೆತ್ತಿಗೇರಿರೆ!

ಅಬ್ಬ ಮತ್ತೆ ಮಾತು ಮಾತು!
  ತಿಳಿಯಿರಾನೆ ಇಂಗಳ;
ಒಬ್ಬರೊಬ್ಬರಾಗಿ ತನ್ನಿ
  ಮುತ್ತಿನಕ್ಕರಂಗಳ!

೧೪ಹೆಸರು ನಿಮ್ಮದೆಲ್ಲ ಚೆಲುವು;
  ನೋಡೆ ಲಿಪಿಯ ನೇರ್ಪಿದು—
ಕೆಸರಿನಲ್ಲಿ ಕಾಕಪಾದ
  ಒತ್ತಿದಂತೆ ತೋರ್ಪುದು:

---

೧೩. ಗದರಿಕೆ.
೧೪. ಅಣಕ ಅಥವಾ ಮೂದಲಿಕೆಯಿಂದ ಆಡುವುದು.

[೧೫]ಅಹಹ ನಿಮ್ಮ ದೋಷಗಳನು
ಮರೆಸಿ ನನ್ನ ನಗಿಸಲು
ಕುಹಕಯುಕ್ತಿ ನಡೆಯದಿಲ್ಲಿ;
ತಿದ್ದಿ ಮೊದಲಿನಿಂದಲು!

[೧೬]ಏನು, ಗಂಟೆಸದ್ದು ಕಿವಿಗೆ
ಮುದ್ದನಿಟ್ಟು ಹೋದರೂ
ಏಳದಿರುವಿರೇಕೆ ಮುಗುದ
ಬಾಲಿಕೆಯರೆ ಎಲ್ಲರೂ?

[೧೭]೩

ಬನ್ನಿರೀಗ ಸಂಜೆಬಿಸಿಲ
ಅರುಣ ಕಿರಣ ಜಾಲದಿ
ನಿರ್ಣಯಿಸುವ ಜಗದ ಬೆಲೆಯ
ನಿಮಿಷಮಾತ್ರ ಕಾಲದಿ!

ಹಾಸಕೀಗ ಹಾಸುಮಣೆಯು,
ಬೇಸರಕ್ಕೆ ಬಿಡುಗಡೆ;
ಬಾಸೆಗಿಲ್ಲ ನೇಮ; ಹೊತ್ತು
ಮುಳುಗುತಿರಲು ಪಡುಗಡೆ!

---

೧೫. ಕೋಪಬೆರೆದ ಅಧಿಕಾರವಾಣಿ.

೧೬. ಪ್ರಸನ್ನ ಮೃದು ವಾಣಿ.

೧೭. ತರಗತಿ ಮುಗಿದನಂತರ ವಿಹಾರಾದಿಗಳಿಂದ ಉತ್ಸಾಹ, ಹರ್ಷ ಇವುಗಳ ವೃದ್ಧಿಯು ಈ ಭಾಗದಲ್ಲಿ ವರ್ಣಿಸಿದೆ.

ರೆಕ್ಕೆಯೆಸೆವ ಹಕ್ಕಿಯನ್ನು
ವಿಾರಿ ನಮ್ಮ ಹುರುಪಿನ
ಪಕ್ಕ ಬೀಸಿ ಹಾರಿ ನಡೆವ
ಹೊಳೆಯ ಹರಿಸಿ ಮೆಲುಪಿನ!

ಬನ್ನಿ ಬನ್ನಿ ನಂದನದಲಿ
ಅರಳಿ ನಲಿವ ಅರಳ್ಗಳೇ,
ನನ್ನ ಬಿನದ-ಚಿಕ್ಕೆ ಮುಡಿದ
ಕುಳಿರುವೆಳಗನಿರುರ್ಗಳೇ!

ಹೃದಯಮುಕುಲದಿಂದ ಹೊರಗೆ
ನುಗ್ಗಿ ಬರಲು ಯೌವನ,
ಎಳವೆಗಟ್ಟು ಸಡಿಲುತಿಹುದು;
ಕಾಮುಗಾಯಿತೌತಣ!

ಹಣಿಕಿ ಮಿಣಿಕಿ ಕಣ್ಣ ಹೊಕ್ಕು
ನೋಡುತಿದೆ ವಿಳಾಸವು;
ಕುಣಿದು ಮಣಿದು ತಣಿಯದರ್ಥ
ಮೂಕ ಮಂದಹಾಸವು!

[೧೮]ತಾರೆಗಡ್ಡಿ ಸಿಡಿವ ಹಾಗೆ
ದಂತಪಂಕ್ತಿಯಿಂದಲಿ
ನೂರು ಮಾತು ಹಾರುತಿಹುದ
ಕೇಳಿ ಹಿಗ್ಗು ಹಿಗ್ಗಲಿ!

---

೮. ಪಟಾಕಿ ಮೊದಲಾದ ಸಿಡಿಮದ್ದುಗಳ ಜಾತಿಗೆ ಸೇರಿದ 'ನಕ್ಷತ್ರದ ಕಡ್ಡಿ' ಎಂದು ಕರೆಯಲ್ಪಡುವ ಪದಾರ್ಥ.

ವಿಮಲಮುಖದ ಗಗನವೇರಿ
   ಬರುವ ನೋಟ-ಮಿಂಚಿಗೆ
ಭ್ರಮಿಸದಿರರು ಸುರರು ಕೂಡ
   ನಿಮ್ಮ ಕೊರಳ್-ವಿಪಂಚಿಗೆ!

ಬಯಲ, ಬಾನ, ಹಕ್ಕಿಹಾಡ,
   ಹೂವು ಹಣ್ಣು ಹಂಪಲ
ನಿಯತಿನಿಯಮರಹಿತರಾಗಿ
   ಕಂಡು ನಲಿವ ೧೯ಸೊಂಪಲಾ!

ಅಮರ ವರುಷಗಳನು ಕಾಂಜಿ-
   ವಿಂದು ಬಾಳ ನಿಮಿಷದಿ!
ಭ್ರಮರದಂತೆ ಗುಂಜಿಸೋಣ;
   ಬುವಿಯೆ ಸಗ್ಗ ಹರುಷದಿ!

ತಳಿರ ಬನದ ತಿಳಿಯ ಜಲವ
   ಮೇಲೆ ಬರುವ ಪವನನ
ಎಳೆಯ ನಗೆಯನೀಂಟಿ ಬರುವ
   ಕುಣಿದು ಹಾಡಿ ತನನ!

ಹಳೆಯ ನೆನಪುಗಳನು ಕೋದು
   ಕವನ ಕಟ್ಟಿ ಹರಿಸುವ;

---

೧೯. ಸೊಂಪು + ಅಲ್ಲವೆ = ಸೊಂಪಲ ! ‘ಅಲ’ ಎಂಬುದು ಒಂದು ಉತ್ಸಾಹ ಸೂಚಕವಾದ “interjection” ಶಬ್ದವೆಂದು ತಿಳಿಯತಕ್ಕದ್ದು ಎರಡನೆ ಬಗೆ.

ಚಳಿಗೆ ಚಳಿಯು ಹುಟ್ಟುವಂಥ
ಭಯದ ಕತೆಯನುಸಿರುವ!

ಮನಕೆ ಬಂದ ಹಾಗಿ ಮಿನುಗಿ
ತಾರೆಗಳನು ಕೆಣಕುವ;
ದಿನಕೆ ತಾಸುಗಳನು ಕಡಿಮೆ
ಮಾಡಿ ಅಣಕವಾಡುವ!

ಬುಗುರಿಯಂತೆ ನಿಗುರಿ ನಲಿವ,
ಗಾಳಿಯಲ್ಲೆ ತೇಲುವ;
ಹೊಗರ ಹಬ್ಬಿಸುತ್ತ ಕಳೆಯ,
ಕಳೆವ ಅಮೃತ ಕಾಲವ!

ನಕ್ಕ ನಗೆಯು ಪಕ್ಕ ಪಡೆದು
ದಿಕ್ಕುದಿಕ್ಕಿಗೆಯ್ದಲಿ;
ಹಕ್ಕಲಲ್ಲಿ ಒಕ್ಕಲಿರುವ
ಹಕ್ಕಿಗಳನು ಕರೆಯಲಿ!

ಒಲವು ನಲವು ಅಮಳ್ಗಳಂತೆ
ಒಂದನೊಂದು ಸೇರದೆ,
ಗೆಲವು ಬರೆದ ಚೆಲುವ ತರದೆ
ಕವನವಿಲ್ಲ ಶಾರದೇ!

ರೊಕ್ಕವಿಲ್ಲವೆಂಬ ಜಗದ
ದುಕ್ಕವಿತ್ತ ಬಾರದು;

ಲೆಕ್ಕವಿಟ್ಟು ಕೊಂಡು ಕೊಡುವ
ತಲೆಗೆ ಜಾಗ ತೋರದು!

ಪೊಂಪುಳಿಯಲಿ ಮುಳುಗಿ ಮಿಂದು
ತೇಲಿಸುತ್ತ ಕಂಗಳ,
ಗುಂಪುಗೂಡಿ ಹೆಜ್ಜೆಯಿಡುವ
ಕಾಲದಲ್ಲಿ ತಿಂಗಳ!

ಸಿಂದೆ ಭೀತಿ ನಾಣು ಗೀಣು
ಸಂದೆಯಂಗಳಿಲ್ಲದ
ಸುಂದರಿಯರೆ ಇಲ್ಲ ಜಗದ
ರೀತಿ ನೀತಿ ಸಲ್ಲದ!

ಬೆಳ್ಳಿ ಬೆಳಕಿನೋಕುಳಿಯನು
ಚೆಲ್ಲಿ ನಡೆವ; ಬಾಳಿನ
ತಲ್ಲಣವನು ತಡೆವ ಶಕ್ತಿ
ಪಡೆವ ಬರುವ ನಾಳಿನ!

ಹಾಲು ಮೊಸರು ಬುತ್ತಿಗಿತ್ತಿ
ಯಾವುದೇಕೆ? ಮೋದದ
ಹಾಲುಗಡಲೊಳಾಳಿದೆಮಗೆ
ಲೆಕ್ಕವಿಲ್ಲ ಲೋಕದ!

ಸೀತೆ, ವಿನುತೆ, ಲಲಿತೆ ಎಲ್ಲ
ಬನ್ನಿ ಬನ್ನಿ ಲಲ್ಲೆಯ

ಔತಣಕ್ಕೆ; ದಿನವು ಕೊನೆಯ
ಕಂಡುದೀಗಳಿಲ್ಲಿಯ!

ಜಕ್ಕುಲಿಸುವ ಲೋಕವನ್ನು
ತಳ್ಳಿ ನಿಂದು ನೋಡುವ
ಹಕ್ಕು ನಮ್ಮದೀಗ ಬಿದಿಯು
ಸಿಕ್ಕದಂತೆ ಕಾಡುವ!

ಮೌನಜಲವ ಬಿರಿದು ಕನಸಿ-
ನಲೆಗಳೆದ್ದು ತೊಳಗಲಿ;
ಜ್ಞಾನಚಂದ್ರ ಮೂಡಿ ಬಗೆಯ
ಆಗಸವನು ಬೆಳಗಲಿ;

ಕೋಪತಾಪವೊಂದು ಇರದೆ
ಹರಿಸವನ್ನೆ ಚೆಲ್ಲುವ
ರೂಪವಾಗಿ ನಾದ-ಬಿಂದು-
ಕಲೆಗಳಾಚೆ ನಿಲ್ಲುವ!

ಮುದಿತ ದಿನವೆ ಉದಿತ ದಿನವು
ಎಂದು ಜಗಕೆ ಸಾರುವ!
ಪವನಗಿರುವ ಪಾವನತೆಯು-
ನಿಂದು ಜಗಕೆ ತೋರುವ!

---

# ಖಗ್ರಾಸ ಖಂಡ





ಸಂದರ್ಭ:—ಸುರತ ದೇಶದಿಂದ ಓಡಿಹೋಗಿ ಸಿಂಹದ್ವೀಪದಲ್ಲಿ ಪ್ರಚ್ಛನ್ನನಾಗಿದ್ದವನು ದೊರೆಯಾದ ಹರಿಕುಮಾರನು. ಸಿಂಹದ್ವೀಪದ ಕಾಡುಮೇಡುಗಳ ನಡುವಣ ಸಿಂಹಪುರದಲ್ಲಿ ಸುರತದಿಂದ ತನ್ನೊಡನೆ ಓಡಿಬಂದ ಜನರ ಮತ್ತು ಸ್ಥಳೀಯರ ಒಂದು ದಂಡನ್ನು ಅವಿಶ್ರಾಂತ ಶ್ರಮದಿಂದ ಕಟ್ಟಿದನು. ತನ್ನ ಸ್ವಾತಂತ್ರ್ಯವನ್ನು ಅಪಹರಿಸಿದ ಪಡುವಣ ಸಮ್ರಾಟನ ಸೊಕ್ಕನ್ನು ಮುರಿಯಲು ಸುರತದ ಜನ ಸುರತ ದೇಶಕ್ಕೂ ಸಿಂಹದ್ವೀಪಕ್ಕೂ ನಡುವಣ ಬ್ರಹ್ಮದೇಶದಲ್ಲಿ ಎದುರಾಯಿತು. ಹೇಗೆಂದರೆ :—

೧

ಸಿಂಹಪುರದಲ್ಲಿ
ಕಟ್ಟಡವಿಯಲ್ಲಿ
ನೆರೆದ ಪಡೆಯಲ್ಲಿ — ಸಿಡಿಲು ಮೂಡಿತ್ತು !
ಬೆಳಗು ಹೊತ್ತಲ್ಲಿ
ಗಾಳಿ ಮತ್ತಲ್ಲಿ
ನಿಂತು ನೆರೆಯಲ್ಲಿ — ನೋಡಿ ನಡುಗಿತ್ತು !

೨

ಮಿಂಚು ಮರೆಯಾಗಿ
ಬಾನು ಬರಿದಾಗಿ
ಸದ್ದು ಸೆರೆಯಾಗಿ — ಸ್ತಬ್ಧವಾಗಿತ್ತು ;
ಸಿಡಿಲು ಹೆಚ್ಚಿತ್ತು
ತೊಳಗ ತೊಡಗಿತ್ತು
ನಿಂತು ನೀಡಿತ್ತು — ನೀಡಿ ಉರಿದಿತ್ತು !

೩

ಕಣ್ಣು ಪಡೆದವುದು
ಕಿಡಿಯ ಹಾರಿಸಿತು!
ಬಾಯುತೆರೆದವುವು — ಗರ್ಜಿಸಿತ್ತೆಂದು!
ಮಣ್ಣು ಕಣಗಳೊಳು
ಕೆಚ್ಚು ಕೂಡಿದೊಲು
ಕಂಡಿತೋ ನಿಲಲು — ವೀರರೆಯ್ತೆಂದು!

೪

ಭರತ ಖಂಡದಲಿ
ದಾಸ್ಯ ಕುಂಡದಲಿ
ಸುಟ್ಟು ಕೆಂಡದಲಿ — ಕೆಂಡವೇ ಆಗಿ
ಇತ್ತ ಬಂದ ಸೋ-
ದರರೆ, ನೀವು ಸೋ -
ತಿಲ್ಲ; ಇದೆ ಲೇಸೋ — ಕಾದಲೊಂದಾಗಿ!

೫

ಅಗ್ನಿ ಪಿಂಡಗಳೆ
ಕಾಲ ದಂಡಗಳೆ
ಶಸ್ತ್ರಖಂಡಗಳೇ — ನಿಲ್ಲಿರೆದೆ ಚಾಚಿ!
ಕಡುಗ ಕಳೆದ ಹೆಂ-
ಬೇಡಿ ಪಡೆವನೇಂ
ಬೇಡಿ? ಎತ್ತುವನೇ — ಬಿಡುಗಡೆಯ ಬಾಚಿ?

೬

ಪರನ ನೆತ್ತಿಯನು
ಕುಕ್ಕಿ ಕತ್ತಿಯನು
ಬಣ್ಣಿಸಲು ಪಾತ್ರ — ಲಭ್ಯವಾವಸ್ತು;

೬

ಎಲೆಲೆ ಗಂಡರೇ
ಸಮರಶೌಂಡರೇ
ಆಗುವಿರೆ ಪಾತ್ರ? — ಬೇಕದಕೆ ಶಿಸ್ತು!

೭

ಲಕ್ಷ ಕಂಠಗಳು
ಗಜರಿ ಹೇಳಿದವು
“ಕೊಡುವುದಾಣತಿಯ — ಕಾದಲೆಮಗೀಗ;
ನಮ್ಮ ನಾಯಕರೆ
ನಿಮ್ಮ ವೀರಕರೆ
ಎದೆಯ ಹಿಗ್ಗಿಸಿದೆ — ಶೌರ್ಯವೇಯೋಗ!”

೮

ಎಂದು ಪಡೆವಳರು
ನಿಂದು ನಿಮಿರಿದರು
ಸೇನೆ ಸರಿದಿತ್ತು — ಭೂಮಿ ಬಿರಿದಿತ್ತು!
ಠೀವಿಯಿಂದ ಹೆ-
ಗ್ಗೋವಿ ಹೊತ್ತು ಹೇ
ವೀರಗಣವೆಲ್ಲ — ಏರಿ ನಡೆದಿತ್ತು!

೯

[illegible]ಕುಂತಾರನೇ -
ತಾರನವರ ನೇ -
ಕಾರ ಹಾರಿದ್ದ — ನಭದಿ ನಿಂತಿದ್ದ!
ಗಾಳಿದೇರ ಕರೆ -
ಯಿಂದ ಕೇಳಿಬರೆ
ಕಹಳೆ, ದುರ್ದಮನ — ಹೂಡಿದರು ಕದನ!

೧೦

ಅಗ್ನಿಗೋಲಗಳ -
ನುಗುಳ್ವಶೂಲಗಳ
ಗಗನದಿಂದಿಳಿಗೆ — ಕರೆದರೇನೆಂಬೆ !
ವಿಘ್ನವೊಂದೆ? ನೂ -
ರಾರು ; ತಡೆಯುನೂ
ತಡೆದು ಜಡಿಯುತ್ತ — ಸಾಗಿದರು ಮುಂದೆ !

೧೧

ಬ್ರಹ್ಮದೇಶದ -
ಬ್ರಹ್ಮವೇಷದಾ
ರಿಪುಗಳನು ಮೆಟ್ಟಿ — ನಿಂದರೆದೆತಟ್ಟಿ!
ದೇವತೆಗಳು ಆ -
ನಂದದಿಂದ ಈ
ಸೇನೆಗೆರಚಿದರು — ಹೂವುಗಳ ಕಟ್ಟಿ !

೧೨

ಕತ್ತಿಗಿತ್ತಿಗಳ
ಮಾರ್ದಕೋವಿಗಳ
ಹತ್ತುಪಟ್ಟಿದ್ದ — ಭೂತಬಂದೂಕು
ತುತ್ತ ಬಂದರೂ
ತಾಳನಿಂದರೋ
ದೇಶ ಸೇವಕರು — ಸಾವಿಗೂ ತೊಡಕು !

೧೩

ನೆಪೋಲಿಯನ್ನನ
ಹಿಟ್ಲರನನ್ನನ
ಮಾರಿದೆದೆಯಾತ — ಸಿಂಹಪುರರಾಜ ;

ಅರಿಗಳರಿಯೆ ರಣ -
ಪಲ್ಲಿ ನುಗ್ಗಿ ಚಣ -
ಚಣಕೆ ಹುರುಪುಣಿಸಿ — ಬಂದರವಿತೇಜ ;

೧೪

ಪಡುವಣಾಳುಗಳ
ಪಡೆಯ ದಾಳಿಗಳ
ತಡೆದ ಸೀಸರನೋ — ಎನ್ನುವಂಥವನು
ಅರಿಕುಠಾರ ತಾ -
ರುಣ್ಯಸಾರ ತಾ -
ಯ್ಗರಗಿ ನಿಲ್ಲಿಸಿದ — ತನ್ನ ಜನರನ್ನು !

೧೫

ವೀರನಾದ ನೃಂ -
ದಾರ ವಂದ್ಯ ' ವಂ -
ದೇಮಾತರಂ' — ಎಂದು ಹಾಡಿಸಿದ ;
ಕಾಡು ಮೇಡು ಗಿರಿ
ಗುಹೆಗಳಲ್ಲಿ ಸರಿ
ತುಂಬಿ ತಾನಾದ — ಭಕ್ತಿ ಸಮ್ಮೋದ !

೧೬

ಬಂಡವಾಲಶಹ
ತಂಡಚೀರಿತಹ —
ಗಂಡ ಸತ್ತಂಥ — ಅಬಲೆಯಂತಾಯ್ತು !
ಹಿಂದು ಹಿಂದು ಜನ
ಹಿಗ್ಗಿತಾಗ ; ವನ
ಪೂರತದ ಬದಿಗೆ — ಹೂತು ನಕ್ಕಿತ್ತು !

೧೭

ಒಂದೆ ವರುಷದಲಿ
ಪಡೆದ ವಿಜಯದಲಿ
ಉಂಡು ತೇಂಕಿತ್ತು — ಸ್ವಾರತಿಯ ಹೃದಯ ;
‘ ಗಂಡುಸೆಂದ ರೀ
ಹರಿ ಕುಮಾರ ರಾ -
ಜನ್ಯ ಕುಲರಾಜ ’ — ಎಂದಳಿರಲ ಭಯ !

೧೮

ಬಿದಿಗದೇಕೊ ಸರಿ -
ಯೆನಿಸಲಿಲ್ಲ, ಹಿರಿ
ಯೆಂದ ಖಡ್ಗವನು — ಮತ್ತೆ ಮರುವರುಷ ;
ಹೊಗಲೆಬೇಕು ಸೂ -
ರತವ, ಹೊಕ್ಕು ಸೂ -
ಡಿಯನು ಬಿಡುಗಡೆಯ — ಕೊಡುವವ ಪುರುಷ ;

೧೯

ಮಿತ್ರ ರಾಜರೊಲಿ -
ದಿತ್ತ ಶಸ್ತ್ರದಲಿ
ಅರ್ಥ ಮುಗಿದಿತ್ತು — ಆದರೆದೆಗೆಡದೆ
ಮತ್ತೆ ಗಂಡ ರಾ -
ಡೊತ್ತಿ ಧುಮುಕಿದರೊ
ಕಣವ, ರಣದಲ್ಲಿ — ಕುಶಲತೆಯ ಬಿಡದೆ !

೨೦

ರಿಪುಗಳೆಲ್ಲ ಸಂ -
ಘಟಿಸಿ ಬಂದು ಸಂ -
ಗ್ರಾಮ ಭೂಮಿಯಲಿ — ಇದಿರಿಸಿದರಂದು :

ಪ್ರತಿಭಟಂಗೆ ಭಟ-
ನಂತೆ ತಾಗಿ ನಟ-
ರಾಜ ಠೀವಿಯಲಿ — ಕಾದಿದರು ನಿಂದು !

೨೧

ಟಾಂಕುಗಿಂಕುಗಳ
ಕಟ್ಟೈ ಗುಂಡುಗಳ
ಮಳೆಯ ಸುರಿಸಿದರು — ಸೂರತೀ ಸುತರು !
ಅರಿಗಳುರಿದು ಸರಿ
ಸರಿದು ನಡೆಯೆ ಸರಿ
ಸುರಿದು ಬಿಟ್ಟಿತ್ತು — ಬಿದಿಗೆ ವೈಬಿವರು !

೨೨

ಶಸ್ತ್ರ ಶಾಸ್ತ್ರ ಹಿಂ
ದಾಯ್ತು ; ಪಡುಗರಿಂ
ದದ್ಭುತದ ಬಾಂಬು — ಬಂದು ಸಿಡಿದತ್ತು !
ಉಟ್ಟ ಧೋತ್ರವನೆ
ಕಾಚಕಟ್ಟಿ ಸೆಣ-
ಸಿದರು ಕಡೆತನಕ — ನೆತ್ತರುರಿದಿತ್ತು !

೨೩

ವ್ಯೋಮಯಾನದಲಿ
ಭೀಮ ವೇಗದಲಿ
ಸಾಗಿದಾ ಧೀರ — ಶೂರಶೋದ್ಧಾರ
ಆಗದಾಗೆ ಕಂ-
ಗೆಟ್ಟು ಕತ್ತಲಂ-
ಬೋಧಿಯಲಿ ಬಿದ್ದ — ಸಿಂಹನೇತಾರ !

೨೪

ಹಾ ವಿದೇಶಿಯೋ –
ಥಾಳಿ ನುಗ್ಗಿ ಹೋ –
ಗಿರಿದು ಕೊಂದಿತ್ತು — ಸೂರತದ ಬಲವ ;
ಹಾ ವಿವರ್ಣಮುಖ
ಸೂರತಕ್ಕೆ ಸುಖ !
ಮುರಿದು ಕೊಟ್ಟಿತ್ತು — ಸೂರತವು ಎಲುವ !

೨೫

ಅತ್ತು ಅತ್ತು ನಾ
ಸತ್ತು ಹೋದೆನಾ
ಹೊತ್ತು ಸುದ್ದಿಯನು — ಕೇಳಿ ಹೃದಯದಲಿ
ಬಿತ್ತು ಕಾದ ಕ –
ಬ್ಬಿಣದ ಗೋಲಕ !
ಗುಪ್ತವಾಗಿತ್ತು — ಆತ್ಮ ಕತ್ತಲಲಿ !

೨೬

ಸುಲಿದು ಸಮ್ಮಾನನು
ಹಿಳಿದು ನೆತ್ತರನು
ತನಿಖೆ ನಡೆಸಿತ್ತು — ಪರರ ಸರಕಾರ !
ಮರಣ ದಂಡನೆಗೆ
ತೆರವೆ ಇಲ್ಲ ; ಹಗೆ –
ತೀರಿಸುವುದಿತ್ತು — ಅದರ ದರಬಾರ !

೨೭

ತರುಣ ತರುಣಿಯರ
ಹುರುಪು ಸತ್ತುದರ
ಮೇಲೆ ತಗೋರಿ — ಕಟ್ಟಿದಂತಾಗಿ

# ಹೂ ಬಾಳು

---

[ಸಂದರ್ಭ :— ೨೦ ನೆಯ ಶತಮಾನದ ಮಧ್ಯಮವರ್ಗದ ವಿನಯನೆಂಬ ವಿದ್ಯಾಧರನು (Graduate) ತನ್ನ ಬಾಳಿನಲ್ಲಿ ಆಕಸ್ಮಿಕವಾಗಿ ಬಂದೊದಗಿದ ಒಂದು ವಿಷಾದಾಂತ ಘಟನೆಯನ್ನು ತಾನೇ ಹೇಳತೊಡಗಿದ್ದಾನೆ]

ಅಲ್ಲಿತ್ತು ನಂದನದ ತೋಟ,
ಅದರಲ್ಲಿ ಹೂಬಿಸಿಲಿನಾಟ!

ಕನ್ನಡದ ಕಣ್ಣು ಕಳಕಳಿಸುವಂಥ ಕಡು
ಪುಣ್ಯ ಭೂಮಿಯಲ್ಲಿ—
ಕಾಲಿಟ್ಟೆನೊಮ್ಮೆ ಕಣ್ದೆರೆಯ ಹೆಮ್ಮೆ ಹೊಸ
ಹರೆಯದೇರಿನಲ್ಲಿ!
ಹಳೆಬಾಳ ದೀನಹಾಡೆಲ್ಲ ಹೀನ ವೆಂ-
ದಟ್ಟಿಬಿಟ್ಟೆ ಕಂಡು
ಹೊಸಕಾಲದಲರ, ಹೊಸಭಾವದೆಲರ ತಂ-
ಪಾದ ಸೋಂಕುಗೊಂಡು!

ಅಲ್ಲಿತ್ತು ನಂದನದ ತೋಟ, ನಲ್ಮೆಯಲೆ-
ದಾಟ, ಮೊಲ್ಮೆಯೂಟ;
ಅಲ್ಲಿತ್ತು ಹುರುಪಿನುಸುರಾಟ, ಹೊಚ್ಚಹೊಸ
ಕನಸಿನೊಂದು ಕೂಟ!
ಅಲ್ಲಿತ್ತು ಗೆಳೆಯರೊಡನಾಟ, ಗೆಳತಿಯರ
ಮಧುರವಾಕ್ಯ ಪಾಠ,

ಅಲ್ಲಿತ್ತು ಮನದ ಹಸಿವಿಂಗುವಂಥ ಹಲ-
ವಾರು ಭೋಗವಾಟ !
ಅಲ್ಲಿತ್ತು ನಂದನದ ನೋಟ,
ಅದರಲ್ಲಿ ಹೂಬಿಸಿಲಿನಾಟ !

ಕೊಪ್ಪರಿಗೆ ಕಂಡ ಹಳ್ಳಿಗನ ಹಾಗೆ "ಅದು
ಸತ್ಯಲೋಕವೊಂದೆ—
ಮುಪ್ಪಡಸಿದಾತನೂ ಜರಿರುಮಾಲು ಸು-
ತ್ತಿರುವ ರಾಜ್ಯ"ವೆಂದೆ ;
ಒಪ್ಪತ್ತು ಹಸಿವ ಹಿಂಗಿಸುವ ಶಕ್ತಿಯೇ
ಹರಿಸವಿತ್ತುದಾಗ;
ಕಪ್ಪಿನಲಿ ಮಿಂಚುಹುಳ ರವಿಸಮಾನ ತಂ-
ಗದಿರನಿಲ್ಲದಾಗ !

ಸಿರಿ ನಿರಿಯಂಚೆಲ್ಲಿ ನರ್ತಿಸುವಳೆಂಬವೊಲು
ನಿಂತ ಮನೆಯ ಹೊಕ್ಕೆ;
ತೆರೆದಂತೆ ಭಾಗ್ಯ ಬರಮಾಡಿ ಕೊಳಲು ನಾ-
ನೊಮ್ಮೆ ನೋಡಿ ನಕ್ಕೆ !
ಅನುಕೂಲ ಕಾಲದಲಿ ಬಿಟ್ಟಕಲ್ಲು ತನಿ-
ವಣ್ಣ ತಾರದಿಹುದೇ ?
ಮನದಲ್ಲಿ ಬೀಗಿ ಮುದದಲ್ಲಿ ಬಾಗಿ, ನಿಂ-
ತೆನಗೆ ಸದೃಶವಿಹುದೇ ?
ಅಲ್ಲಿತ್ತು ನಂದನದ ನೋಟ,
ಅದರಲ್ಲಿ ಹೂಬಿಸಿಲಿನಾಟ !
ಅಹ ದಿವಸ ನಿಮಿಷವಾಗಿತ್ತು, ಪರರ ಕೈ-
ಗಾವ ಕಾಲ ನಿಲಲು,

ಸ್ವಾತಂತ್ರವೆಂಬ ಪದ ದಿವ್ಯವಲ್ಲಿ? ಸ-
ಗ್ಗಕ್ಕು ತೀರ ಮಿಗಿಲು !
ಅಮೃತಾಬ್ಧಿ ಮಥನದಲಿ ಹೊಂಟ ದಿವ್ಯರಸ-
ವೆಂದೆನದಕೆ ನಾನು;
ಅದು ಜೀವಕಾಯ್ತು ಸಂಜೀವನೈಕ ಮಧು !
ಅಹಹ ಹೇಳಲೇನು ?

ಆನಂದದಿಂದ ಅರಾಮಧಾಮದಾ
ರಾಮರಾಯರಲ್ಲಿ
ಶ್ರೀಮಂತನಡೆಯೊಳಿರುತಿದ್ದೆ, ಮನೆಯಮರೆ-
ತಿದ್ದೆ, ಬಾಗಿಲಲ್ಲಿ—
ಆ ಲಲಿತೆಯೆಂಬ ಕಣ್ಗೊಂಬೆ ಕಣ್ಗೆ ಕಣ್
ಬೆಸೆದು ಕರಿಯುವಾಗ
ಅಲೆಯಾಗಿ ಹೋದೆ, ಕಲೆಯಾಗಿ ಹೋದೆಬೆಲೆ
ಬಂದು ಸೇರುವಾಗ !

ಅಲ್ಲಿತ್ತು ನಂದನದ ನೋಟ,
ಅದರಲ್ಲಿ ಹೂಬಿಸಿಲಿನಾಟ !

ಅವಳೆಂಥ ಹುಡುಗಿ! ಬಂಗಾರದಂಥ ಗುಣ,
ಮಗುವಿನಂಥ ಸರಳೆ;
ನಕ್ಷತ್ರದಂತೆನಗೆ, ನೀಲಮಣಿಯ ಲೋ-
ಲಾಕಿನಷ್ಟು, ತರಳೆ!
ಆ ಪ್ರೀತಿ ಅವಳ ನಿರ್ಭೀತಿ, ನಡೆಯನಯ-
ನೀತಿ ನವ್ಯರೀತಿ;
ಆ ಕೃತಿಯೆ ಚಂದ, ಆಗತಿಯೆ ಛಂದ, ಅದು
ಮೂರ್ತಿವೆತ್ತ ಗೀತಿ !

ಆ ಸಲುಗೆಯೇನು, ಆ ನಿಲುಗೆಯೇನು, ಅವ-
ಳಿದೆಯ ಮೆಲುಗೆ ಯೇನು!
ಅವರಲ್ಲಿ ನಾನು ಮತ್ತೇನು? ಜೇನು ಮು-
ಗ್ಧಾಬ್ಧಿಯೊಂದೆ ಮೀನು!!
ಸಭ್ಯತ್ವಧರ್ಮರತ್ನ ಪ್ರದೀಪ, ಸೌ-
ಮ್ಯತ್ವಗಂಧ ಕುಸುಮ,
ಅವಳವಳ ಹಾಗೆ, ಮಿಕ್ಕವರು ಮಿಕ್ಕವರು,
ಹೆಸರಿಗಷ್ಟೆ ಕುಸುಮ!
ಅಲ್ಲಿತ್ತು ನಂದನದ ನೋಟ,
ಅದರಲ್ಲಿ ಹೂಬಿಸಿಲಿನಾಟ!

ಬೆಳುದಿಂಗಳಂತೆ ಮತ್ತವಳ ಪ್ರೀತಿ ಬೆಳೆ-
ಬೆಳೆದು ಹತ್ತಿರಾಗಿ,
ಪೂರ್ಣತೆಯ ದಾರಿಯುಲಿ ನಡೆದು ಪೂರ್ಣಿಮೆಯ
ಬಯಸುತಿತ್ತು ಮಾಗಿ!
ಸೋದರರ ಸಂಗಡೆನ್ನೊಡನೆ ವಿಹರಿಸಲು
ಬರಲು ಮೊದಲುಮಾಡಿ,
ಅವರವು ಹೆಚ್ಚಿ ನನ್ನನ್ನು ನೆಚ್ಚಿ ಬರು-
ತಿದ್ದಳೊಬ್ಬಳೋಡಿ!
ನಾನೆಂದ "ನಿಂಥ ಹಿತಮಧುರ ಭಾವ ದೊ-
ಳ್ಪಾತಿನಪ್ಸರೆಯನು
ಕಂಡಿಲ್ಲ, ಕಾಣಲಳವಲ್ಲ, ಸಗ್ಗದಿಂ-
ದಿಳೆಗೆ ಬಂದಳೇನು!"
ಹೃತ್ಕಮಲದಲ್ಲಿ ಸಂಸುಪ್ತವಾದ ಹಳೆ-
ನೆನಹುಗಳನು ಹೇಳಿ

ಮಾತಾಡುತಿದ್ದೆ ವರಗಿಳಿಗಳಂತೆ, ನಡೆ—
ದಿತ್ತು ಪ್ರೇಮ ಕೇಳಿ !
ಅಲ್ಲಿತ್ತು ನಂದನದ ತೋಟ,
ಅದರಲ್ಲಿ ಹೂ ಬಿಸಿಲಿನಾಟ !

ಒಮ್ಮೊಮ್ಮೆ ಹಿಂದೆ ಹತಭಾಗ್ಯನಾಗಿ ಹಲ-
ತೆರದ ಕಷ್ಟಬಂದು
ದಪ್ಪಿಡಿದು ದಾನಿಗಳ ದರ್ಪವಗ್ನಿಯಲಿ
ನುಸುಳಿ ನೊಂದು ಬೆಂದು
ನಾ ನರಳುತಿದ್ದ ಕತೆಕೇಳಿ ಕಂಬನಿಯ
ಸುರಿಸಿ ಬಿಡುವಳಾಕೆ !
ಸಂಕಟಕೆ ಕರಗುವಾ ದೇವಗುಣವಿರಲು
ಬೇರೆಯಾವುದೇಕೆ ?

"ಆ ಹುಟ್ಟುಹಬ್ಬ, ಈ ಜುಟ್ಟುಹಬ್ಬ, ಸಂ-
ಭ್ರಮದ ಮೆಚ್ಚುಮಾಟ,
ಅವರೆತ್ತಿ ತೋರುವರಿವರೊತ್ತಿ ಕರೆವರೆಂ-
ಬೊಲುಮೆ ಜೇನಿನೂಟ—
ಈ ಹೊತ್ತು ಭಕ್ಷ್ಯ, ಮತ್ತೊಂದು ಲಕ್ಷ್ಯವೆಂ-
ಬಟ್ಟಹಾಸವಿಲ್ಲ,
ಔನ್ನತ್ಯವೇರಿ ತೇರೆಳೆಸಿಕೊಂಬುದನು
ಬಲ್ಲ ಜೀವವಲ್ಲ !
ಅಲ್ಲಿತ್ತು ನಂದನದ ತೋಟ,
ಅದರಲ್ಲಿ ಹೂ ಬಿಸಿಲಿನಾಟ !
"ಕಡಲಾಳದಿಂದ ಸಿಡಿವೆದ್ದ ನೊರೆಯ ಕಣ
ತೀರ ಸೇರಿ ತನ್ನ

ಒಡಲಾಳದಿಂದ ತನ್ನನ್ನು ಕಾನೆವಿರ-
ಚಿಸುವ ಹಾಗೆ ಮುನ್ನ—
ಅಡಿನೆಲದ ಮೇಲೆ ಮುಡಿದೋರಿಮೂಡಿ ಮಲ-
ಮಲಿಸುತಿದ್ದೆ, ಹಸಿರ
ಕುಡಿಯೇಳುವಂತೆ ನಸುನಕ್ಕು ನಿಮಿರಿ ಹೀ-
ರುತ್ತ ಸುಗ್ಗಿಯುಸಿರ !

"ಸುಂದರನೆ? ಅಲ್ಲ; ಸುರುಚಿರನೆ? ಅಲ್ಲ; ಸುಮ-
ಧುರನೆ ? ಬಲ್ಲರಾರು ?
ವರಮತಿಯೆ ? ಅಲ್ಲ; ತರಗತಿಯೊಳೆಲ್ಲರೊಳ-
ಗೊಬ್ಬ; ಕೇಳ್ವರಾರು ?
ಹರಿದಿತ್ತು ಬಾಲ್ಯಕೌಮಾರವೆಲ್ಲ "ಬೇ-
ಕೆ"ಂಬ ಮರಳುಗಾಡ
ಉರಿಯಲ್ಲಿ, ನಿತ್ಯಚರಿಯಲ್ಲಿ ಪೂರ ಬರಿ-
ಯಲ್ಲಿ ಬಾಳ ಗೂಢ !

ಅಲ್ಲಿತ್ತು ನಂದನದ ನೋಟ,
ಅದರಲ್ಲಿ ಹೂ ಬಿಸಿಲಿನಾಟ !

"ಕಣ್ಣೆತ್ತಿ ಕಂಡರದು ಪಾಪ, ಕೊರಲ ಸರಿ-
ಸಿದರೆ ಕೋಪ ತಾಪ !
ಕಾಲೆತ್ತಿ ನಡೆಯಲಿದೆಶಾಪ, ಮೆಲುನಡಿಗೆ
ಕಳ್ಳತನದ ರೂಪ !!
ಧನಹೀನದೀನ ತೃಣಮಾನವಮಾನವ ವಿ-
ಮಾನ ವಿಮನನಾಗೆ,
ದಿನಮಾನಹಾಗೆ; ಮತ್ತೇನು ಬೇಗೆ ಹಣೆ-
ಬರಹವಿರಲು ಮೇಗೆ ?

'ಲಕುಮಿಯ ಕುಮಾರ ಮಲಗಿದರೆ ಶೀತತಿರು-
ಗಿದರೆ ವಾತಭೂತ;
ಅಂಗಾಲಕೆಂಪಿಗೈವತ್ತು ಮದ್ದು, ಕನಿ-
ಕರಿಸುವಶ್ರು ಪಾತ !
ಅದೆ ದೀನರ್ಗೇನು ನೋವಿಲ್ಲ, ಹಸಿದರಾ-
ರೋಗ್ಯಭಾಗ್ಯಲಾಭ;
ನರಳಿದರೆ ಪಾಪದಪವಾಪ, ಬೇಡಿದರೆ
ಬೆಟ್ಟದಂಥ ಲೋಭ !

ಅಲ್ಲಿತ್ತು ನಂದನದ ನೋಟ,
ಅದರಲ್ಲಿ ಹೂ ಬಿಸಿಲಿನಾಟ !

"ಇದ ಕಂಡೆನುಂಡೆನನುಭವಿಸಿ ಸವೆದೆ, ರಸ-
ಗವಳವೆಂದೆ ನಿದನೆ
ಇದರಿಂದ ಹೊರೆದೆ ನಿದರಲ್ಲಿ ಬೆಳೆದೆ, ಕೃಮಿ-
ಯಾಗಿ ಬಂದುದನ್ನೆ—
ಕೊರೆಕೊರೆದೆ, ನಂಥ ಆಬಾಳ ಕುಲುಮೆಯಲಿ
ಕುದಿದು ಕೆಂಡವಾಗಿ
ಹೆರೆಯುವನು ಕಂಡೆ ಹೊಂಗನಸುಹಿಗ್ಗಿ ಬರೆ
ತಂಡ ತಂಡವಾಗಿ !"

—ಎಂಬೆನ್ನ ಬಾಳ ಬಗೆಬಗೆಯು ಬನ್ನಗಳ
ಬಣ್ಣಿಸುತ್ತಲಿದ್ದೆ
ತುಂತುಂಬಿ ಬಂದ ಕಣ್ಣೀರಿನಿಂದೆದೆಯ
ಮಾಡುತ್ತಿದ್ದಳೊದ್ದೆ !
ಎದೆಗೆಡೆಯ ಕೊಟ್ಟು ಮತ್ತೆನ್ನು ತಿದ್ದ "ಳಲೆ
ಪ್ರೇಮದೇವ, ಇನ್ನು

ಬಿಡುವೆತೆಯು, ನೋಡು ಹೊಸಬಾಳ ಹಂದರವ
ಕಟ್ಟಿ ಕೊಡುವುದನ್ನು”!
ಅಲ್ಲಿತ್ತು ನಂದನದ ನೋಟ,
ಅದರಲ್ಲಿ ಜೂ ಬಿಸಿಲಿನಾಟ!

ಅಂತಿರಲು ಸೊಗದ ತಿರುತಿರುಳ ಕಡೆಗೆ ಹರಿ,
ಯುತ್ತಲಿರಲು ಚಿತ್ತ,
ಬಂತೊಂದುಮಾಸ ಮತ್ತೆಲ್ಲಮಾಸಗಳ
ಮುಕುಟವಾಗುವಂಥ;
ಆ ಸಮಯದಲ್ಲಿ ಹಡೆದಾತ ವರನ ನಿ-
ಶ್ಚಯಿಸಿ ಬಿಟ್ಟ ಸುತೆಗೆ—
ಕೈ ಹಿಡಿದು ಬಾಳನಡೆಯಲ್ಲಿ ನಡೆಯಿಸಲು
ನೆರವನಿತ್ತು ಜೊತೆಗೆ!

ಅನುರೂಪನಂತೆ, ಗುಣವಂತನಂತೆ, ಧನ-
ಪಾಲಪುತ್ರನಂತೆ—
ಬಂಗಾರವೀವ, ಸಿಂಗಾರಗೈವ ನೇ-
ನೇನೊಮಾಳ್ಪನಂತೆ;
ಆ ಯುವಕನಲ್ಲಿ ಇಷ್ಟೇನು ವಿದ್ಯೆಗಧಿ-
ಕಾರವಿಲ್ಲವಂತೆ,
ಈ ಯುವತಿಗಲ್ಲಿ ವರವರಣದಲ್ಲಿ ಹೊಣೆ
ಬಹಳವಿಲ್ಲದಂತೆ!
ಅಲ್ಲಿತ್ತು ನಂದನದ ನೋಟ,
ಅದರಲ್ಲಿ ಉರಿಬಿಸಿಲ ಕಾಟ!
ಏನೇನೊಮಾಡಿ ಎಂತೆಂತೊತನ್ನ ಹಡೆ-
ದವಳಿಗರುಹಲಾಗಿ

೯

ಕರುಳಿಗಿರದ ಹಾ -
ಗಾಗಿ ದೇಶ 'ಹಾ'
ಎಂದು ಬಸವಳಿದು—ಬಿತ್ತು ಹೆಣವಾಗಿ!

೨೮

ಬರದ ಮೇಲೆ ಬರ
ಬರೆಯ ಮೇಲೆ ಬರೆ
ಹೊರೆಯ ಮೇಲೆ ಹೊರೆ—ಹೇರಿದರು ಪರರು;
ತೆರದ ಮೇಲೆ ತೆರ
ಕರದ ಮೇಲೆ ಕರ
ಹಾಕಿದರು ಪರರು—ಮನುಜದಾನವರು!

೨೯

ಎಲುಬಿನೋಡುಗಳ
ಬೀಡು, ಕೀಲುಗಳ
ಯಂತ್ರವಾದತ್ತು—ಸೂರತನ ದೇಹ
ಎಲೆಲೆ ಪ್ರೇತಗಳ
ಕೂಸು ಕುನ್ನಿಗಳ
ಮರಣವಾದತ್ತು—ಸೂರತನ ಗೇಹ!

೩೦

ಸಹರದಂತೆ ನಾ -
ಡೆಲ್ಲ ರುದ್ರನಾ -
ಟಕದ ಬಯಲಾಯ್ತು—ಚಿತೆಯು ಹೊತ್ತಿತ್ತು;

ಅಹರಹದಲೂ
ಅನ್ನದಗಳೂ
ಇಲ್ಲವಾದತ್ತು—ದೇಶವತ್ತಿತ್ತು !

೩೧

ಕಾಲಭೈರವನ
ಲೀಲೆಯಲ್ಲಿ ಜನ
ಮಣ್ಣು ಕಚ್ಚಿತ್ತು—ಸುಣ್ಣವಾಗಿತ್ತು ;
ಅರಿಗಳೆಂಬ ರಣ-
ಹದ್ದು ಕಾಗೆ ಬಣ
ತಿಂದು ತೇಗಿತ್ತು— ಕೊಂದು ಕೂಗಿತ್ತು !

೩೨

ಬಾನು ಬಯಲು ಬೆಂ-
ಗಾಡು ಗುಡ್ಡ ವನ
'ಬಿಕೋ' ಎಂದಿತ್ತು—ಶೂನ್ಯವಾಗಿತ್ತು ;
'ನಾನು' ಎಂಬ ನರ-
ಹುಳದ ಕೊರಳಸರ
ಕೇಳದಾಗಿತ್ತು—ದೈನ್ಯವಾಗಿತ್ತು !

೩೩

ತಮದ ಗೂಢ ಗವಿ-
ಯಲ್ಲಿ ಬಾಳಛವಿ
ಮುಳುಗಿ ಹೋಗಿತ್ತು—ನಾಡದಾಗಿತ್ತು ;

ಸಮರ ರಾಕ್ಷಸರ
ಕಾಲ ಕರ್ಕಶರ
ಕಣ್ಣು ಕೆರಳಿತ್ತು—ಉರಿಯುಗುಳುತಿತ್ತು!

೩೪

[redacted] ಹರಿ ಕುಮಾರನಿವ
[redacted]—ಹರ ಕುಮಾರನವ
ಎಂದು ಬಿಟ್ಟೀತೇ—ಕೇಡು ಕೆರಳಿರಲು?
ದೊರಕಲಹುದೆ ಜಯ
ಸತ್ಯಕಿಲ್ಲ ಭಯ
ಸಾವು ಬಹುದೆಂದು—ಸಾವನಪ್ಪಿರಲು!

೩೫

ಸೊನ್ನೆ ಸೊನ್ನೆಗಳ
ಸಾಲು ಸಾಲುಗಳ
ಕಂಡು ನಕ್ಕಿತ್ತು—ಗೆದ್ದವರ ಕಿಚ್ಚು!
ತನ್ನ ಕಾಲ ಕೆಳ -
ಗಿದ್ದ ದೇಹಗಳ
ಮೆಟ್ಟಿ ಬಿಕ್ಕಿತ್ತು—ಅವರ ರಣಹುಚ್ಚು!

೩೬

ಸಮರದಾಸೆ ಸಾ -
ಹಸದ ಬಾಸೆ ಸಾ -
ರಿತ್ತು ಕೆಳ ಕೆಳಗೆ - ಬಿತ್ತುತಲದೊಳಗೆ;

ಘರತ ಖಂಡವೇ
ಚರಿತೆಯಿಂದಲೇ
ಕಳಚಿಹೋದತ್ತು-- ಇಲ್ಲದೊಳವೊಳಗೆ !

೩೭

ಪ್ರಳಯವಲ್ಲ, ಖ -
ಗ್ರಾಸ! ರಾಹುಮುಖ
ನುಂಗಿಬಿಟ್ಟಿತ್ತು— ಸೂರತವನೆತ್ತಿ !
ಅಳಿವಿನಾಳದಲಿ
ಮರೆತ ಕಾಳದಲಿ
ಹೂತುಹೋಗಿತ್ತು— ಬೆಂಕಿಯನು ಬಿತ್ತಿ !

ಅವ“ಳವರ” ಕಿವಿಗೆ ಬೀಳಿಸಲು ಬೆಂಕಿಯೇ
　　ನೆಗೆದಹಾಗೆ ಹೋಗಿ
“ಅವಜಾತಿಯಲ್ಲ, ಧನವಾತಗಿಲ್ಲ, ಬರಿ
　　ವಿದ್ಯೆಯಿಂದಲೇನು ?
ಬಿಡುಸಾಕು” ಎಂದು ನನ್ನಾಯ್ಕೆಯನ್ನು ಕೊಡ-
　　ಹಿದರು; ಹೇಳಲೇನು ?

ಮರುಮರುಗಿ ಬಾಲೆ ಹೂ ಮಾಲೆಯಂತೆ ಕಳೆ-
　　ಗಳೆದು ಬಾಡಿ ಬಳಲಿ,
ತಿರುತಿರುಗಿ ನನ್ನ ಬೇಡಿದಳು ರಕ್ಷಿಸೆಂ-
　　ದವಳು ಬಹಳ ಅಳಲಿ;
ಆಜಾತಿಧನವ ಪಡೆದಿಲ್ಲವಾಗಿ ಧನ-
　　ಜಾತನಲ್ಲವಾಗಿ
ಬರಿಮಾತಿನಿಂದ ಸಂತೈಸ ಹೋಗಿ ಕೈ-
　　ಸೋತೆ ಕಾಣದಾಗಿ !

ಅಲ್ಲಿತ್ತು ನಂದನದ ನೋಟ
ಅದರಲ್ಲಿ ಉರಿಬಿಸಿಲ ಕಾಟ !

ಈ ವಿದ್ಯೆಯಿಂದ, ಸಂಸ್ಕಾರದಿಂದ, ಈ
　　ಬುದ್ಧಿಯಿಂದ, ದುಡಿವ
ಈ ಶ್ರದ್ಧೆಯಿಂದ, ಸಂಕಲ್ಪದಿಂದ ಮೆ-
　　ಚ್ಚಿಸಲಶಕ್ತ ಬಡವ—
ಧನಜಾತಿಗೋಪ ಹಿಂದೀಯು ತಂದೆಪಿರ
　　ಕುರುಡನೆನೆದು ಮುಳಿದು
ಮನಬೀತು ಹೋಯ್ತು, ಮರುಗಿತ್ತುಮತ್ತೆ ಬದಿ-
　　ಯನ್ನೆ ಕಡೆಗೆ ಹಳಿದು !

ವರಶುಲ್ಕ ಹೇಯವೆಂದೊದರುವಾತನೂ
ಜಾತಿದಾಸನಾಗಿ
ಕರಕರಗಿ ಕನ್ನೆಯುರ ಬಾಳ ಜಾಡಿಸುವು-
ದಿರಲು ಧನಿಕನಾಗಿ
ಇರುವಂಥ ರಾಮರಾಜರಿಗೆ ಮಗಳ ಮನ-
ದಾಳವರಿಯಲಳವೆ?
ಅಧಿಕಾರವಿರಲು ಪಿತೃದೇವನಾಜ್ಞೆ ಮ-
ತ್ತಾರಿಗಾದರೊಳವೆ?

ಅಲ್ಲಿತ್ತು ನಂದನದ ತೋಟ,
ಅದರಲ್ಲಿ ಉರಿಬಿಸಿಲ ಕಾಟ!

ಇದು ಧೀರಜೀವವಿದು ಬದ್ಧಜೀವ. ದಾ-
ಸ್ಯಕ್ಕೆ ಮಣಿಯದಿರುವ
ಉದ್ದಾಮ ಜೀವವಾದರೂ ಒಂದು! ಬಹು-
ಸಂಖ್ಯೆಯನ್ನು ಮುರಿವ
ಸಾಹಸವ ಸಾಧ್ಯವಿತ್ತಲ್ಲದವಳ ತಾ-
ಯ್ತಂದೆವಿರನು ಗೆದ್ದು
ನೋಯಿಸಲು ಲಲಿತೆಯುಳವಗೆಯು ಬರದೆಮನ
ದೂರ ಹೋದೆನೆದ್ದು!

ಆಕಾಲಬಂತು, ಪಥುಲಲಿತೆ ಮತ್ತು ವರ
ಕೃಷ್ಣಮೂರ್ತಿರಾಯ—
ಜಡಧರ್ಮದಂಕುಶದ ತಿವಿತದಿಂದ ಆ-
ಯ್ತವಳ ಮನಕೆ ಗಾಯ;
ಕತ್ತಲಿಸಿ ಕಣ್ಣು ತತ್ತರಿಸಿ ಹೆಣ್ಣು ಗತ-
ಜೀವೆಯಾದಳೆನಲು—

ಮತ್ತೇನ ಹೇಳಲೀ ಕತೆಯು ಬರೆಯುತಿರೆ
    ನಡುಗುತಿಹುದು ಬೆರಳು!
  ಅಲ್ಲಿತ್ತು ನಂದನದ ನೋಟ,
  ಅದರಲ್ಲಿ ಉರಿಬಿಸಿಲ ಕಾಟ!

ನಳನಳಿಸಿ ಬೆಳೆದ ನಮ್ಮನೆಯ ಬಳಿಯ ಮಂ-
    ದಾರಗಿಡವ ಕಂಡು
ಲಲಿತೆಯೇ ಮುಂದೆ ನಿಂದಿರುವಳೆಂದು ಮೈ-
    ಮರೆವೆ ಸೊಬಗನುಂಡು;
ಮನೆಯೆದುರಿಗಿರುವ ಮಲ್ಲಿಗೆಯು ಮೊಗ್ಗೆಯರ-
    ಳುವುದ ಕಂಡು ನಾನು
ಲಲಿತೆಯೇ ನಗುವಳೆಂದತ್ತ ನೋಡಿ ನಿಡು-
    ಸುಯ್ವನೀಗಲೂನು!

ನಡುರಾತ್ರಿಯೆದ್ದು ನಿಟ್ಟಿಸುತ "ತಾರೆಗಳು
    ಲಲಿತೆ ಮಧುರವಾಗಿ
ಕರೆಗೊಡುವ ನೋಟಗಳು, ಪ್ರೀತಿಯಾಟಗಳು"
    ಎಂಬೆ ಮರುಳನಾಗಿ;
ನಾ ಮತ್ತೆ ಕನಸು ಹೋಳಾಗಿ ನಿಜವನೆನೆ-
    "ಅಯ್ಯೋ" ಎಂದು ಹಲುಬಿ—
ದಿನದಿನವು ಮಲಿನಮನನಾಗಿ ಬಾಳುತಿಹೆ
    ದುಃಖವನ್ನು ತರುಬಿ!
  ಅಲ್ಲಿತ್ತು ನಂದನದ ನೋಟ,
  ಅದರಲ್ಲಿ ಉರಿಬಿಸಿಲ ಕಾಟ!

ಮಾನವನು ತನ್ನ ಮಸಣವನು ತಾನೆ ರಚಿ-
    ಸುವುದು ಹೀಗೆಯಲ್ತೆ?
ನಿಷ್ಪುತ್ರವಿಧವೆ ಜೀವಿದ್ದಹಾಗೆ "ತಿಥಿ"
    ಮಾಡಿಕೊಂಬಳಲ್ತೆ?
ಆ ರಾಯ ತನ್ನ ಮಗಳನ್ನು ಕೊಂದು ತಾ
    ಸತ್ತು ಬಾಳ್ವನಂತೆ—
ಈ ಜೀವ ತನ್ನ ನಿಧಿ ಕಳೆದುಕೊಂಡು ಬಳ-
    ಲುತ್ತ ಬಾಳುವಂತೆ!

ಈ ವಿಶ್ವದಾಳದಲ್ಲಡಗಿ ಶಾಂತ ಸೂ-
ತ್ರಾಧಿಕಾರಿ, ಕೇಳು—
ನೀ ನಕ್ಕು ಹೇಳಬಹು“ದೆಲ್ಲ ಬಾಳು ಬರಿ
ಬಂಜೆ”ಯೆಂದು “ಹಾಳು”;
ಆ ಮಧುರಭಾವ ವೈವಿತ್ತ ಜೀವ ನ-
ನ್ನೊಡನೆಬಾಳುತಿರಲು
ನಾ ಹೇಳುತಿದ್ದೆ “ನೀಮುಗ್ಧ”ನೆಂದು: ಹೀ-
ಗಾಗಲೇಕೆ ಹೇಳು?

ಅಲ್ಲಿತ್ತು ನಂದನದ ನೋಟ,
ಅದರಲ್ಲಿ ಉರಿಬಿಸಿಲ ಕಾಟ!

ಆಕಟಿಕಟ ವಿರಹವೀಬಾಳ ಸಾರ ವಿಡ-
ಕಂತವಿಲ್ಲದಾಯ್ತೆ?
ಆಕುಟಿಲರ ಹೃದಯದೆಳವೊಗ್ಗು ಕೃತಕ ವಿಧಿ-
ಯಿಂದ ಕೃತ್ರವಾಯ್ತೆ?
ಅಜ್ಞಾತ ದಾನವತೆಯಿಂದ ಮಾನವನು
ಮೂಢನಪ್ಪನೇಕೆ?
ಸುಜ್ಞಾನವಿದ್ದರೂ ದುರ್ವಿನೀತತೆಯ
ಮುರಿಯಲಾರನೇಕೆ?

ಓ ಲಲಿತೆ, ಮೋಡದಲಿ ಹೊಕ್ಕು ಕಂಬನಿಯ
ಕರೆಯುತಿರುವೆಯೇನು?
ನನ್ನವಳೆ, ಬೆಟ್ಟದಲಿ ಹುಟ್ಟಿ ನನ್ನಕಡೆ
ಹರಿಯುತ್ತಿರುವೆಯೇನು?
ಕಾದಲ್ಮೆ, ಹತ್ತಿ ತಂಗಾಳಿಗುದುರೆಯನು
ಕೂಡಬರುವೆಯೇನು?
ನನ್ನಾತ್ಮದಲ್ಲಿ ಸರ್ವಾಧಿಕಾರ ನಿನ-
ಗೀವೆ ಬಾರೆಯೇನು?

ಅಲ್ಲಿತ್ತು ನಂದನದ ನೋಟ,
ಅದರಲ್ಲಿ ಉರಿಬಿಸಿಲ ಕಾಟ!

—:o:—

# ಮಲ್ಲಿಕಾ ಮಾಧವೀಯ

ನಾ-ಹೇಳುವೆ ಕೇಳೇ ಗೆಳತಿ,
ಬಂ-ದಿರುವುದು ನಿನ್ನದು ಸರತಿ !

ಮಾವಿನ ಮರಗಳ ಮಲ್ಲಿಗೆ ಗಿಡಗಳ
ತೋಹಿಗೆ ಆದಿನ ನಡೆದೆ—
ವಾರುಣಿ ವಾರಿಜ ನೇತ್ರದೆ ಸೆಳೆದಿರೆ
ವಾರಿಧಿರಾಯನ ಬಿಡದೆ ;
ದೂರದಿ ರವಿ ಕದ್ದಿವರನು ನೋಡುತ
ಮೋಡದೆರೆಯ ಮರೆಯಲ್ಲಿ
ಬೀರಿರೆ ಮುಗುಳ್ನಗೆ ಚಿನ್ನದ ಗೆರೆಗಳು
ಮೂಡಿದ್ದವು ಮರದಲ್ಲಿ !

ಮರಕುಟುಕನು ಅಲ್ಲೆಲ್ಲೋ ಒಂದೆಡೆ
"ಕುಟುಕುಟು" ವೊಸಗೆಯ ಕೊರೆದು
ಮನದನ್ನೆಗೆ ತಂತಿಸುತಿರೆ ರಾಗದೆ ;
ಕೆಂಪಿನ ಕೊಕ್ಕನು ತೆರೆದು
ಕರೆಯುತ್ತಿರೆ ಸಾರಿಕೆಯನು ಗಿಳಿಗಳ
ಅರಸ ರಸಾಲವ ಹಿರಿದು—
ತೆರಳಿದೆನೊಬ್ಬಳೆ ತೋಟಕೆ ತಂಪಿನ
ಸುಳಿಗಾಳಿಯ ಸೊಲ್ಲರಿದು.

ಹಣ್ಣನು ಹೆಕ್ಕಲು ಮೆಲ್ಲಗೆ ಬಾಗಿದೆ
ಗಿಣಿಗಡಕವ ಕಂಡೆಂದೆ:
" ಬಣ್ಣಿಸಿ ಸಮೆದಾ ಬೊಮ್ಮನ ಗೈಮೆಯು
ಹೆಣ್ಣಿಗೆ ಕುಂಕುಮದಂತೆ
ಹಣ್ಣನು ಕೊರೆದಿಹ ನೀ ಶುಕಶೇಖರ

ಶಿಲ್ಪಿಯು ಕಡೆದಿಪ ಹಾಗೆ ;
ಹಾರಿತೆ ಬಳಿಕಾ ಶುಕ-ಶುಕಿಯಿರುವೆಡೆ
ಹರುಷದ ಬುದ್ಬುದವಾಗೆ ? ”

ನಾ-ಹೇಳುವೆ ಕೇಳೇ ಗೆಳತಿ,
ಬಂ-ದಿರುವುದು ನಿನ್ನದು ಸರತಿ !

ಅತ್ತಿತ್ತರಸುತ ದರಲೆಯು ಸರಿಸುತ
ಹಣ್ಣಾರಿಸಿ ಹಣ್ಣಾದೆ ;
ಥಕ್ಕನೆ ಮುಳುಗಿದ ಭಾಸ್ಕರನಿದಿರಲಿ
ಹೊಕ್ಕನು ಚಂದ್ರಮನೆಂದೆ !
ಆದರೆ ತಿಂಗಳ ಬಹುಳದೊಳೀನಿದು
ತುಂಬಿದ ಬಿದುವೊಗವೆಂದು —
ನೋಡುತ್ತಿರೆ ಕೈಕೊಡೆಯನು ಬೀಸಿದ
ತರುಣನದೊಬ್ಬನು ಬಂದು !
ನಾಚಿಸಿ, ಚಾಚಿದೆ ವೊಗವನು ಕೆಳಗಡೆ,
ಬೆಚ್ಚಿದೆದೆಯು ಸಂತೈಸಿ
ನೋಡಿದೆ; ನೋಡಿದ ಮಾಧವನೆನಗೆ
ಮಾತಾಡಿತು ಹೊರಸೂಸಿ :
“ಒಬ್ಬಳೆ, ಮಲ್ಲಿಗೆ, ಏನಿದು, ಎಲ್ಲಿಗೆ,
ಏತಕೆ ?” ಎನ್ನಲು ಹೃದಯ
ತಬ್ಬಿಬ್ಬಾಯಿತು, ಎಡಹಿತು, ತಡಹಿತು—
ಮೌನವೆ ಬೆಳಸಿತು ಕೆಳೆಯು !
ಹರೆಯದ ಹೊಸ್ತಿಲ ಹತ್ತಿದ ಹೃದಯವು
ಬಳಸುವ ಭಾಷೆಯೆ ಬೇರೆ ;
ಬರಿನುಡಿಯಾಡಂಬರ ವಿರದಲ್ಲಿಯು
ಅಕ್ಷರದಕ್ಷರ ಧಾರೆ !

ತೆರಗಣ್ಣಲಿ ಆ ಮೂರ್ತಿಯು ಜಿಂಬಿಸಿ
ಹೇಳಿದೆ, "ಮಾಧವ, ನನ್ನ
ಕರೆಯಲು ಬಂದೆಯ ? ಅಯ್ಯೋ, ಮರಳದೆ
ಹೋದೆನು ಕತ್ತಲ ಮುನ್ನ !

ನಾ-ಹೇಳುವೆ ಕೇಳೇ ಗೆಳತಿ,
ಬಂ-ದಿರುವುದು ನಿನ್ನದು ಸರತಿ !

"ಆಗಲೆ ಮನೆಯಲಿ ಕಾದಿಹರೊಬ್ಬರು
ನಿನ್ನನು ನೋಡಲು ಬಂದು ;
ಬೇಗನೆ ನಡೆ" ಎನಲೆತ್ತಿದ ಕಾಲಿಗೆ
ಎಡಹಿತು ಬೇರಲ್ಲೊಂದು ;
"ಹಾ" ಎಂದರಚುವುದರ್ಧದೊಳಿರೆ ಬಂ-
ದೆತ್ತಿದ ತೋಳುಗಳಲ್ಲಿ
ಗರುಡನದಲ್ಲ ಮನೋಜನ ಗರೆಯೊಂ-
ದಿದ್ದಿತು ಸಖಿ ಕೇಳಿಲ್ಲಿ !

ಮಾನಸಶಾಸ್ತ್ರವ ಕಲಿತೂ ಮತ್ತನು—
ಮಾನಿಸಿ ಮಾನಿಸ ಕೆಟ್ಟ ;
ಧೇನಿಸಿ ಧೇನಿಸಿ ಪಡೆಯುವನೇನನು ?
ಪರಲೋಕಕೆ ಮನೆಸುಟ್ಟ !
ಮಾಧವನನ್ನೆದೆಗಾದವ ಪ್ರೀತಿಯ
ವೇದವನರುಹಿದನಾಗ :
"ಹೌದೋ ಅಲ್ಲವೋ ಹೇಳಾವರನಲಿ
ಹುಟ್ಟಿದು ನಿನಗನುರಾಗ".

ಕೇಳಿದ್ದೆನು ಬಂಡೆರಗಿದವರ ವಿ-
ಜ್ಞಾನದಿ ಬಹಳ ಹುಶಾರಿ ;

ಮಾಳಿಗೆಯಲಿ ಕುಳಿತೋದುತಲಿದ್ದರೆ
ಕೇಳಿಸದವಗೆ ನಗಾರಿ !
ಇಂತಹ ಸರಸಿಯ ವರಿಸಿದೆನಾದರೆ
ಎಂತಹ ಸರಸಿಯು ಸಾರಿ
ಚಿಂತೆಯ ದೂರಿಕರಿಸಲಿ ಎಂಬೀ
ಚಿಂತೆಗೆ ತೆರೆಯುದೆ ದಾರಿ ?

ನಾ-ಹೇಳುವೆ ಕೇಳೇ ಗೆಳತಿ,
ಬಂ-ದಿರುವುದು ನಿನ್ನದು ಸರತಿ !

ನಡುಗಿತು ತನು, ಝಲ್ಲೆಂದಿತ್ತೆದೆ ಆ
ಒಣಬದುಕನು ನೆನೆದಲ್ಲಿ ;
ಮಿಡುಕಿತಾತ್ಮ, ವಿಚಾರ ವಿರೋಧಿಸಿ
ಗುಡುಗಿತು ನಿಟ್ಟುಸಿರಲ್ಲಿ :

"ಮಾಧವ ಮೋದರಮಾಧವ, ರಸವಾ-
ಣೀಧವ ! ಸಹೃದಯಭಾವ—
ಆದರ ತುಂಬಿದ ಮೇದುರಮುಖ ವಿ-
ದ್ಯಾಧರ, ಬಲುಮಿದು ಜೀವ !"
ನೆನೆದೇ ನೆನೆದೆನು ನಡೆದೇ ನೆಡೆದೆನು
ಕತ್ತಲ ಕಪ್ಪನು ಬೆಳಸಿ ;
ಜಿವುರಿತು ಮುಖವ್ಮೈ—"ಮಾಧವ ನೀನೇ "
ಎಂದೆನು ಗದ್ಗದವೆರಸಿ.

ಉಸುರಿದ ಮಾಧವ ನನ್ನವನಾದವ
ಪ್ರಣಯ ಪ್ರಣವವ ನಿಂತು :
"ಮನದನ್ನೆಯೆ, ಮಕರಂದವೆ, ಮಧುರವೆ,
ಮಲ್ಲಿಗೆಯೇ ಕೇಳ್ಳಿಂತು —

"ಮಾಟದ ಕುವರಿಯೆ, ಮುದ್ದಿನ ಅಮರಿಯೆ,
ಮನೆ ಹೊಸ್ತಿಲ ಹೊಗುವಾಗ
ದಾಟದೆ ಬೀಳಪಶಕುನವ ದೆಂಬರು
ತಪ್ಪುವುದೀ ದುರ್ಯೋಗ."

ನಾಣಡಗಿತು, ನಗೆಮೂಡಿತು ಮನದಲಿ
ಮೆಚ್ಚಿದೆ ರಸಿಕನೆ ಎಂದು,
ಏನೋ ಮಾಡಿದೆ; ನೋಡಲು ಕಣ್ದೆರೆ-
ದೆನ್ನೆದೆಯಿದಿರಿನ್ನೊಂದು !

ನಾ-ಹೇಳುವೆ ಕೇಳೇ ಗೆಳತಿ,
ಬಂ-ದಿರುವುದು ನಿನ್ನದು ಸರತಿ !

ನಾಚಿದೆ ನಾಚಿದೆನಾದರೆ ಕತ್ತಲು
ಕಣ್ಣಿಗೆ ಬೆಳಕಿತ್ತಿತ್ತು;
ಯೋಚನೆ ಮಾಡದೆ ನಡೆದೆನು ಮನೆಯಲಿ
ಮುಗ್ಗರಿಸಿದೆ ಮೈತೆತ್ತು.
ಅಮ್ಮನು "ಅಯ್ಯೋ" ಎಂದಳು, ಆದರೆ
ತಂದೆಯು ಪಿಟ್ಟೆನಲಿಲ್ಲ ;
ಗಾಯಕೆ ಬರೆಬಿದ್ದಂತೆನಗೆನಿಸಿತು—
"ಸಾಯದೆ ಬದುಕಿದೆನಲ್ಲ !"

ಎಂಟೇ ದಿನದಲಿ ಪರಿಣಯ ನಿರ್ಣಯ ;
ಬೇಡದ ಕೈಹಿಡಿವಂಥ
ಕಂಟಕಕಿಂತಲು ಹೆಚ್ಚಿನ ಕಂಟಕ
ಉಂಟೇ? ಹೆಣ್ಣೆದೆಗಂತ !

ಮಂಗಲವಾರವಮಂಗಲವೆನಿಸಿತು
ವರಪೂಜೆಯು ನಡೆವಾಗ;

ತಂಗೂಳನು ತಿಂದಂತೆದೆ ಹೇಸಿತು—
ಅಯ್ಯೋ ಎಂತಹ ಭೋಗ!

ಧಾರೆಯ ನೀರಿನಧಾರೆಗೆ ಕಂಬನಿ-
ಧಾರೆಯು ಬೆರೆವುದ ಕಂಡು
ಕಾರಿದಕೆಂಡವ ಹೆತ್ತವ ಮತ್ತವ
ಹೋಮದ ಕರ್ಜೋಗೆಯುಂಡು;

ಯಾರಾದರು ನನ್ನವರಿರುವರೆ ಈ
ಘೋರಾನ್ಯಾಯದಿನೆನ್ನ
ಪಾರಾಗಿಸುವವರೆಂದೆದೆಯೊಡೆದಿರೆ
ಕತ್ತಲುಕವಿದಿತು ಕಣ್ಣ!

ನಾ-ಹೇಳುವೆ ಕೇಳೇ ಗೆಳತಿ,
ಬಂ-ದಿರುವುದು ನಿನ್ನದು ಸರತಿ!

ಎಚ್ಚತ್ತೆನು ಗೋಧೂಳಿಯ ಕಾಲವು
ಬ್ರಾಹ್ಮೀಸ್ಥಿತಿಗಿಳಿದಿತ್ತು;
ನಚ್ಚಿನ ಮಾಧವರಾಯರ ನೋಟವು
ಕತೆಯನು ಕನ್ನಡಿಸಿತ್ತು:
ವರನನ್ನಿರವನು ಗಮನಿಸಿ ಥಟ್ಟನೆ
ಅರಿತನು ಮೂರ್ಛೆಯಪರಿಯ;
ಹರಿವಶ್ರುವನೊರಸಿದ ನೆಮ್ಮಮ್ಮನ
ಮರುಕವ ಕಳೆದನು ಹಿರಿಯ.

"ಬೇಸರಪಡದಿರಿ, ಬಾಲಿಕೆಯೆದೆ ಹೂ-
ಮಾಲಿಕೆಯೇ ಸರಿ! ಅದನು
ಕೇಸುರಿಯಲಿ ಹಿಡಿವರೆ? ನೀವವಳನು
ಕೇಳದೆ ಮಾಡಿದಿರಿದನು;

ಆಸುರಿಯೀ ವಿಧ, ಧರ್ಮದ ಪಟ್ಟಿಯು
ಮಾಸಿದೆ ಹಿಂದೂಕುಲದ ;
ಏನೆಂದರು ಲೇಸೆನ್ನರು ಯಾರೂ ;
ತಿರುಗುವೆ ನಾನೆಂ"ದೊರೆದ !

ಉಷೆ ಕುಂಕುಮ ಕರಡಿಗೆಯನು ತಂದಳು
ಮೂಡಲ ಮನೆಯೊಳಗಿಂದ :
ತೃಷಿತೇಕ್ಷಣದಲಿ ನೋಡಿದೆನವರಾ
ಮುಖವನು ಸೆರಗೊಳಗಿಂದ ;
ಕುಂಕುಮವಿಟ್ಟರು, ಪ್ರೀತಿಯ ಕೊಟ್ಟರು
ಮಂದಸ್ಮಿತ ಮುಖದಿಂದ—
ಮಂಟಪದಲಿ ಮಂಗಲರವ ಮೊಳಗಿತು ;
ಕೈಹಿಡಿದೆನು ಕೈಯಿಂದ !

ನಾ-ಹೇಳುವೆ ಕೇಳೇ ಗೆಳತಿ,
ಬಂ-ದಿರುವುದು ನಿನ್ನದು ಸರತಿ !

ಮಾಧವ ಮಲ್ಲಿಗೆ, ಮಲ್ಲಿಗೆ ಮಾಧವ
ಆದೆವು ನಾವಂದಿಂದ ;
ಪ್ರೇಮಾನಂದಗಳೊಂದಾದಂದದಿ
ಕೂಡಿರುವುದೆ ಬಲುಚಂದ !
ಪ್ರಭೆ ನೀನೆಂಥವಳಿನ್ನೂ ತಿಳಿಯದ
ಸನ್ಯಾಸಿನಿಯರ ಹಾಗೆ
ಅಭಿಲಾಷೆಯನೊತ್ತಾಯದೊಳೊತ್ತಿಹೆ ;
ಹಗೆಯಾದೀತದು ಕಡೆಗೆ !

ಆಸುರಯಜ್ಞಕೆ ಬಲಿಯಾಗದೆ ನಿಜ-
ಭಾಸುರ ಹೃದಯವ, ಗೆಳತಿ,

ದೇಶಾಂತರದಲ್ಲಾದರು ಕಾದಿಹು ;
ಧೈರ್ಯವನುಳಿದರೆ ಕೆಡುತಿ—
ಮಾನಸಜಲ ಕಲಹಂಸಕುಲಕ್ಕೆ ವಿ-
ಹಾರಕೆ ತಕ್ಕುದು ಮಾತ್ರ ;
ಮಾನಿಸದಿದ್ದರೆ ಮಾಹಿಷಯೂಥದ
ದಾಳಿಗೆ ಕೂಡಲೆ ಪಾತ್ರ !

ಮುಗುಳ್ನಗೆ ಮೂಡಿದ ನಿನ್ನೀಮೊಗ ವಿ*-
ದ್ಯಾಧರನಾವನ ಎದೆಯನು
ಹದಗೆಡಿಸದು? ಹೇಳರಗಿಳಿ, ಬಾರೇ
ಬಲ್ಲೆನು ನಿನ್ನೊಳವಗೆಯ ;
ಪ್ರಭೆ, ಹರ್ಷಪ್ರಭೆಯಾಗುವೆ ಬುದ್ಧಿ-
ಪ್ರಭೆ ಗೆಳೆಯನ ಹುಡುಕಿದರೆ—
ನಭ ನೀರಾಜನ ಹಿಡಿವುದು ತಾರಗೆ-
ಯಾಳಿಗೊಂಡೆಲೆಲೇ ಚದುರೆ !

ನಾ-ಹೇಳುವೆ ಕೇಳೇ ಗೆಳತಿ,
ಬಂ-ದಿರುವುದು ನಿನ್ನದು ಸರತಿ !

—ಶ್ರೀ "ಬಾಲಪುರಂದರ'',
ಭಟಕಲ್.

[ಈಚೆಗೆ ಮಧ್ಯ ಪ್ರಾಂತದಲ್ಲಿ ಈ ಕಥನ ಕವನದಲ್ಲು ಸುರಿರುವ ಕತೆಯಂತೆ ಒಂದು ಘಟನೆ ನಡೆದಿರುವುದು ಪತ್ರಿಕೆಗಳಲ್ಲಿ ವರದಿಯಾಗಿದೆ. ಅದರ ಹಿನ್ನೆಲೆಯಲ್ಲಿ ಇದನ್ನು ಓದಿದರೆ ಕತೆಯು ಸತ್ಯತೆಗೊಂದು ಮೆರುಗು.]

---

* Graduate.

---

ಇಂಡಿಯನ್ ಪ್ರೆಸ್, ಬಳೇಪೇಟೆ, ಬೆಂಗಳೂರು ಸಿಟಿ.